

ಕರ್ನಾಟಕ ಸರ್ಕಾರ

# ನುಡಿ ಕನ್ನಡ

## ತೃತೀಯಭಾಷಾ ಕನ್ನಡ ಪಠ್ಯಪುಸ್ತಕ

## ಎಂಟನೆಯ ತರಗತಿ





೨೦೧೫

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೇ ಹಂತ,
ಬೆಂಗಳೂರು – ೮೫

# ಪಠ್ಯಪುಸ್ತಕ ರಚನಾ ಸಮಿತಿ

## ಅಧ್ಯಕ್ಷರು

**ಡಾ. ಎ. ಶಶಿಕಲ,** ಕನ್ನಡ ಪ್ರಾಧ್ಯಾಪಕರು, ಸೆಂಟ್‌ಆನ್ಸ್ ಶಿಕ್ಷಣಮಹಾವಿದ್ಯಾಲಯ, ಮಂಗಳೂರು,

## ಸದಸ್ಯರು

೧. **ಶ್ರೀ ಎ. ಭುಜಂಗಾಚಾರ್,** ಸಶಿ ಜ್ವಾಲಾಮಾಲಿನಿ ಬಾಲಿಕಾಪ್ರೌಡಶಾಲೆ,ಸಿಂಹನಗದ್ದೆ, ನರಸಿಂಹರಾಜಪುರ ತಾ, ಚಿಕ್ಕಮಗಳೂರು,ಜಿ

೨. **ಶ್ರೀ ಕಾಳಪ್ಪ ಪತ್ತಾರ್,** ಸಹ ಶಿಕ್ಷಕರು ಎಮ್. ಬಿ. ಎಸ್. ಎಲ್. ಪ್ರೌಢಶಾಲೆ, ಗಾಂಧಿನಗರ, ಬಳ್ಳಾರಿ,

೩. **ಡಾ. ಸಾಸ್ವೆಹಳ್ಳಿ ಸತೀಶ್,** ಸಹ ಶಿಕ್ಷಕರು, ಸರ್ಕಾರಿ ಪ ಪೂ ಕಾಲೇಜು, ಶಿವಮೊಗ್ಗ,

೪. **ಶ್ರೀಮತಿ ವಾಣಿ ಜಿ ಗಟ್ಟಿ,** ಸಹ ಶಿಕ್ಷಕರು, ಸರ್ಕಾರಿ ಪ್ರೌಡಶಾಲೆ, ಬಿ.ಎಂ ರೋಡ್, ಸಕಲೇಶಪುರ, ಹಾಸನ ಜಿಲ್ಲೆ.

೫. **ಶ್ರೀ ಸಿ.ಕೆ ಪ್ರಹ್ಲಾದ್,** ಉಪನ್ಯಾಸಕರು, ಸ ಪ ಪೂ ಕಾಲೇಜು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

೬. **ಶ್ರೀ ವಿ.ಕೆ ವಿಟ್ಲ ,** ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಡಶಾಲೆ, ಗುರುವಾಯನಕೆರೆ ಬೆಳ್ತಂಗಡಿ ತಾ, ದಕ್ಷಿಣ ಕನ್ನಡ ಜಿಲ್ಲೆ.

## ಪರಿಶೀಲಕರು

**ಶ್ರೀ ಎ. ಬಿ. ಚಂದ್ರಶೇಖರ,** ಪ್ರಾಧ್ಯಾಪಕರು, ಶ್ರೀ ಆದಿಚುಂಚನಗಿರಿ ಶಿಕ್ಷಣಮಹಾವಿದ್ಯಾಲಯ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ.



## ಸಂಪಾದಕೀಯ ಮಂಡಳಿ ಸದಸ್ಯರು

೧. **ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, 'ರಾಗಿಣಿ', ಹಂಪಿನಗರ, ಬೆಂಗಳೂರು.

೨. **ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್. ಬಿ. ಕಾಲೋನಿ, ಯಲಹಂಕ, ಬೆಂಗಳೂರು.

೩. **ಡಾ. ವಿಷ್ಣು ಎಂ. ಶಿಂದೆ,** ಪ್ರಾಧ್ಯಾಪಕರು, ಶಿಕ್ಷಣವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

## ಮುಖ್ಯ ಸಂಯೋಜಕರು

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ.
ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦೦೮೫.

## ಸಲಹೆ ಮತ್ತು ಮಾರ್ಗದರ್ಶನ

೧. **ಶ್ರೀ ನಾಗೇಂದ್ರಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫.

೨. **ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦೦೮೫.

## ಕಾರ್ಯಕ್ರಮ ಸಂಯೋಜಕರು

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

# ಮುನ್ನುಡಿ

೨೦೦೫ ರ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿಗೆ ಅನುಗುಣವಾಗಿ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ನೆಯ ಸಾಲಿನಿಂದ ಒಂದರಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ಹನ್ನೊಂದು ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಏಳು ಮಾಧ್ಯಮಗಳಲ್ಲಿ ಕೋರ್ ವಿಷಯಗಳನ್ನು ರಚನೆ ಮಾಡಲಾಗುತ್ತಿದೆ. ೨೦೦೫ ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮುರಿದು ಅವುಗಳ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳನ್ನು ಕೆಳಗಿನ ಮೂಲಭೂತ ವಿಧಾನಗಳ ಆಧಾರದ ಮೇಲೆ ರಚಿಸಲಾಗಿದೆ. ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach).

ಪಠ್ಯಪುಸ್ತಕಗಳಲ್ಲಿರುವ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಭಾರತೀಯ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾಪೂರಕ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು

ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆ ಹಾಗೂ ಮಕ್ಕಳ ಅಭ್ಯಾಸ ಪುಸ್ತಕಗಳಲ್ಲಿ ಅನೇಕ ಚಟುವಟಿಕೆಗಳನ್ನು ಮಕ್ಕಳಿಂದ ಮಾಡಿಸಿ ಅವರಲ್ಲಿ ಸಂಬಂಧಪಟ್ಟ ಸಾಮರ್ಥ್ಯ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ(learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ ( learning to do) ಯನ್ನು ವೃದ್ಧಿಮಾಡುತ್ತದೆ. ಪ್ರತಿ ಘಟಕದಲ್ಲಿಯೂ ಕೆಲವು ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಜೋಡಿಸಲಾಗಿದೆ. ಅವುಗಳನ್ನು ಮಕ್ಕಳೇ ಕಂಡುಹಿಡಿದು, ಚರ್ಚಿಸಿ ಜೀವನದಲ್ಲಿ ಅವುಗಳ ಅರಿವನ್ನುಂಟುಮಾಡಿಕೊಳ್ಳುವಂತೆ ಮಾಡಬೇಕು.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ ಮತ್ತು ಸಂಪಾದಕ ಮಂಡಳಿಯ ಸದಸ್ಯರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕವಿಗಳ ಹಾಗೂ ಸಾಹಿತಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಇದಕ್ಕೆ ತಮ್ಮ ಒಪ್ಪಿಗೆಯನ್ನು ನೀಡಿರುವ ಕವಿಗಳಿಗೆ ಹಾಗೂ ಸಾಹಿತಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ.ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಕ್ರಮ ಪರಿಷ್ಕರಣೆ ಹಾಗೂ
ಪಠ್ಯಪುಸ್ತಕ ರಚನೆ ಕ.ಪ.ಪು. ಸಂಘ
ಬೆಂಗಳೂರು.

**ನಾಗೇಂದ್ರಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ
ಬೆಂಗಳೂರು

# ಸಮಕ್ಷಮ

ಭಾಷೆ ಮಾನವನ ಜೀವನಕ್ಕೆ ಅತ್ಯವಶ್ಯಕವಾದ ಒಂದು ಸಾಧನ. 'ಬಾಯಿದ್ದವರು ಬರದಲ್ಲೂ ಬದುಕಿದರು' ಎಂಬ ಮಾತನ್ನು ನೀವು ಕೇಳಿರಬಹುದು. ಭಾಷೆಯನ್ನು ಚೆನ್ನಾಗಿ ಬಲ್ಲವನು ಎಂತಹ ಕಷ್ಟಕರ ಪರಿಸ್ಥಿತಿಯಲ್ಲೂ ಸಮರ್ಥವಾಗಿ ಬಾಳಬಲ್ಲ. ಹಾಗಾಗಿ ಇಂದಿನ ನಮ್ಮ ಮಕ್ಕಳಲ್ಲಿ ಭಾಷೆಯ ಬಗೆಗಿನ ಸಾಮರ್ಥ್ಯವನ್ನು ನಮ್ಮ ಮಿತಿಯಲ್ಲಿ ಗರಿಷ್ಠ ಮಟ್ಟದಲ್ಲಿ ಬೆಳೆಸುವುದು ಕೇವಲ ಭಾಷಾಅಧ್ಯಾಪಕರ ಗುರಿ ಮಾತ್ರವಲ್ಲ; ಎಲ್ಲ ಅಧ್ಯಾಪಕರ ಗುರಿಯೂ ಹೌದು.

ಭಾರತಸರ್ಕಾರ ದೇಶದ ಎಲ್ಲ ಅಧ್ಯಾಪಕರಿಗೆ, ಶಾಲೆಗಳಿಗೆ ಕೊಡಮಾಡಿರುವ 'ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ೨೦೦೫' ಭಾಷಾ ಕಲಿಕೆ ಮತ್ತು ಬೋಧನೆಯನ್ನು ಕುರಿತಂತ  ಗಮನಾರ್ಹವಾದ ಅಂಶಗಳನ್ನು ದಾಖಲಿಸಿದೆ. "ಭಾರತದಲ್ಲಿ ಇತರ ದೇಶಗಳಂತಲ್ಲದೆ ಶಾಲಾ ಹಂತದಲ್ಲೇ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಮಕ್ಕಳು ಕಲಿಯುತ್ತಾರೆ. ಈ ಭಾಷಿಕ ವೈವಿಧ್ಯ ಅನೇಕ ಕ್ಲಿಷ್ಟ ಸವಾಲುಗಳನ್ನು ಮುಂದಿಡುವಂತೆಯೇ ಅನೇಕ ಅವಕಾಶಗಳನ್ನೂ ತೆರೆದಿಡುತ್ತದೆ. ದ್ವಿಭಾಷಿಕ ಪ್ರೌಢಿಮೆ, ಅರಿವಿನ ಸಂವರ್ಧನೆ, ಸಾಮಾಜಿಕ ಸಹನೆ, ವೈವಿಧ್ಯಮಯ ಚಿಂತನೆ ಮತ್ತು ವಿದ್ಯಾರ್ಜನೆಯಲ್ಲಿ ಅಪ್ರತಿಮ ಸಾಧನೆ ಇವುಗಳ ಮಟ್ಟವನ್ನು ಗಣನೀಯವಾಗಿ ಹೆಚ್ಚಿಸುತ್ತವೆ ಎಂಬುದನ್ನು ಅನೇಕ ಅಧ್ಯಯನಗಳು ತೋರಿಸಿಕೊಟ್ಟಿವೆ" ಎಂಬ ಈ ದಾಖಲೆಯ ಮಾತು ಕನ್ನಡವನ್ನು ತೃತೀಯ ಭಾಷೆಯಾಗಿ ಕಲಿಸುವ ಸಂದರ್ಭದಲ್ಲಿ ಅತ್ಯಂತ ಔಚಿತ್ಯಪೂರ್ಣವೆನಿಸುತ್ತದೆ. ಕನ್ನಡವನ್ನು ತೃತೀಯ ಭಾಷೆಯಾಗಿ ಕಲಿಸುವ ಅಗತ್ಯವನ್ನೂ ದಾಖಲೆ ಸ್ಪಷ್ಟಪಡಿಸುತ್ತದೆ. "ದ್ವಿಭಾಷಿಕತೆ ಅಥವಾ ಬಹುಭಾಷಿಕತೆ ಜ್ಞಾನವರ್ಧನೆಗೆ ಸಹಕಾರಿ ಎಂಬ ಅಂಶವನ್ನು ನಾವಿಂದು ಖಚಿತವಾಗಿ ಬಲ್ಲೆವು. ಭಾರತದ ಭಾಷಿಕ ಪರಿಸ್ಥಿತಿಯು ಒಡ್ಡುವ ಸವಾಲುಗಳನ್ನು ಎದುರಿಸಲು ಮತ್ತು ಅದು ಒದಗಿಸುವ ಅವಕಾಶಗಳನ್ನು ಬಳಸಿಕೊಳ್ಳಲು ರೂಪಿಸಿದ ಪ್ರಯತ್ನಗಳಲ್ಲಿ ತ್ರಿಭಾಷಾ ಸೂತ್ರವೂ ಒಂದು. ಅದು ಅನೇಕ ಭಾಷೆಗಳನ್ನು ಕಲಿಯಲು ಚಿಮ್ಮುಹಲಗೆಯಾಗಿ ಬಳಸಿಕೊಳ್ಳಬಹುದಾದ ಒಂದು ತಂತ್ರ. ಅದನ್ನು ಅಕ್ಷರಶಃ ಪಾಲಿಸಬೇಕಾದ ಅಗತ್ಯವಿದೆ. ಬಹುಭಾಷಿಕತೆ ಮತ್ತು ರಾಷ್ಟ್ರೀಯ ಸಾಮರಸ್ಯವನ್ನು ಪ್ರೋತ್ಸಾಹಿಸುವುದೇ ಅದರ ಆದ್ಯ ಉದ್ದೇಶ".

ಭಾಷಾಶಿಕ್ಷಣದಲ್ಲಿ ಬಹು ಭಾಷೆಗಳನ್ನು ಅಳವಡಿಸುವುದು ಕೇವಲ ಮಕ್ಕಳ ಕಲಿಕೆಗೆ ಒದಗಿಸುವ ಭಾಷೆಗಳ ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲ, ಬಹುಭಾಷಿಕ ತರಗತಿಯನ್ನು ಒಂದು ಸಂಪನ್ಮೂಲದ ರೂಪದಲ್ಲಿ ಬಳಸಿಕೊಳ್ಳಲು ಅಗತ್ಯವಾದ ತಂತ್ರಗಳನ್ನು ರೂಪಿಸಲೂ ಇದರಿಂದ ಸಾಧ್ಯವಾಗಬೇಕು.

ಕನ್ನಡ, ಕರ್ನಾಟಕದ ಭಾಷೆ; ಅನೇಕರ ಮಾತೃಭಾಷೆಯೂ ಹೌದು. ನಾಡಿನ ಸಾಂಸ್ಕೃತಿಕ ಸ್ವರೂಪವೇ ಕನ್ನಡ. ಇಲ್ಲಿ ನೆಲೆಸಿರುವ ಜನರೆಲ್ಲ ಕನ್ನಡ ಭಾಷೆಯನ್ನು ಬಲ್ಲವರಾದರೆ, ಇಡೀ ರಾಜ್ಯದ ಜನತೆ ಪರಸ್ಪರ ಹೊಂದಾಣಿಕೆ ಮತ್ತು ಸಾಮರಸ್ಯದಿಂದ ಬಾಳಲು ಅನುಕೂಲವಾಗುತ್ತದೆ. ಆದುದರಿಂದ ಕನ್ನಡ ಮಾತೃಭಾಷೆ ಅಲ್ಲದವರು ಸಹ, ಕನ್ನಡವನ್ನು ಕಲಿಯುವುದು ಅನಿವಾರ್ಯ ಹಾಗೂ ಅತ್ಯಗತ್ಯ. ಇಂಥವರು ಕನ್ನಡವನ್ನು ಪ್ರಥಮ ಭಾಷೆಯಾಗಿ ಅಧ್ಯಯನ ಮಾಡುವುದಾದರೆ ರಾಜ್ಯಭಾಷಾ ವಾಹಿನಿಗೆ ಬರುವುದರಲ್ಲಿ ಸಂದೇಹವಿಲ್ಲ. ಕಾರಣಾಂತರದಿಂದ ಅದು ಸಾಧ್ಯವಾಗದಿದ್ದಾಗ ಸರಳ, ಸುಲಭವಾಗಿ ತೃತೀಯ ಭಾಷೆಯನ್ನಾದರೂ ಅಭ್ಯಸಿಸಬೇಕು.

ಕನ್ನಡವನ್ನು ತೃತೀಯ ಭಾಷೆಯಾಗಿ ಬೋಧಿಸುವಾಗ ಭಾಷೆಗೆ ಸಂಬಂಧಿಸಿದ ಕೆಲವು ಸಾಮರ್ಥ್ಯಗಳನ್ನು ಬೆಳೆಸಲು ಗಮನಕೊಡಬೇಕಾಗುತ್ತದೆ.  ಈ ಸಾಮರ್ಥ್ಯಗಳಿಗನುಗುಣವಾಗಿ ಈ ಹಂತದಲ್ಲಿ ಕನ್ನಡವನ್ನು ಮೂರನೆಯ ಭಾಷೆಯಾಗಿ ಬೋಧಿಸುವಾಗಿನ ಆಶಯ ಮತ್ತು ಉದ್ದೇಶಗಳನ್ನು ಮೂರು ವರ್ಷಗಳಿಗೆ (೮, ೯ ಮತ್ತು ೧೦ನೇ ತರಗತಿ) ಕೆಳಕಂಡಂತೆ ಗುರುತಿಸಿಕೊಳ್ಳಲಾಗಿದೆ:

**ಆಶಯ:**

ಪಠ್ಯದ ಮೂಲಕ ಮಕ್ಕಳು

- ನಾಡು ನುಡಿಯ ಹಿರಿಮೆಯನ್ನು ಅರಿಯಬೇಕು.
- ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಅಭಿರುಚಿಯನ್ನು ಬೆಳೆಸಿಕೊಳ್ಳಬೇಕು.
- ಸಾಮಾಜಿಕ, ಸಾಂಸ್ಕೃತಿಕ, ವ್ಯಾವಹಾರಿಕ, ವೈಜ್ಞಾನಿಕ ಪರಿಸರಕ್ಕೆ ಹೊಂದಿಕೊಳ್ಳುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು.
- ಕನ್ನಡದ ಸರಳ ರಚನೆಗಳನ್ನು ಓದಿ ಅರ್ಥೈಸುವ ಸಾಮರ್ಥ್ಯ ಬೆಳೆಸಿಕೊಳ್ಳಬೇಕು.
- ಕನ್ನಡ ಭಾಷೆಯಲ್ಲಿ ದೋಷರಹಿತ, ಕ್ರಮಬದ್ಧ ಹಾಗೂ ಆತ್ಮವಿಶ್ವಾಸದಿಂದ ಅಭಿವ್ಯಕ್ತಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು.
- ಕನ್ನಡದ ನುಡಿಗಟ್ಟು, ಗಾದೆ ಹಾಗೂ ಪರಿಕಲ್ಪನೆಗಳನ್ನು ಸಂದರ್ಭಾನುಸಾರ ಅರ್ಥವತ್ತಾಗಿ ಪ್ರಯೋಗಿಸುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕು.
- ಸಾಹಿತ್ಯದ ವಿವಿಧ ಪ್ರಕಾರಗಳ ಪರಿಚಯದೊಂದಿಗೆ ರಸಾಸ್ವಾದನೆಯ ಮನೋಭಾವವನ್ನು ಬೆಳೆಸಿಕೊಳ್ಳಬೇಕು.
- ಕನ್ನಡ ಭಾಷೆಯ ಭಾಷಾಂಶಗಳನ್ನು ಕಲಿತು ಬಳಸುವುದನ್ನು ಕಲಿಯಬೇಕು.

**ಉದ್ದೇಶಗಳು: (೮,೯ ಮತ್ತು ೧೦ನೇ ತರಗತಿಗಳಿಗೆ ಒಟ್ಟಾಗಿ)**

೧. ಆಲಿಸುವ, ಗ್ರಹಿಸುವ, ನಿರರ್ಗಳ ಹಾಗೂ ಸ್ಪಷ್ಟವಾಗಿ ಸ್ವರಭಾರದೊಂದಿಗೆ, ಓದುವ ಸಾಮರ್ಥ್ಯವನ್ನು ಬೆಳೆಸುವುದು.

೨. ಜ್ಞಾನಾರ್ಜನೆ, ಸಾಹಿತ್ಯಾಭಿರುಚಿ, ಚಿಂತನೆ ಮತ್ತು ಆನಂದಕ್ಕಾಗಿ ಸ್ವತಂತ್ರವಾಗಿ ಓದಲು ಸಮರ್ಥರಾಗುವಂತೆ ಮಾಡುವುದು.

೩. ಪದಭಂಡಾರವನ್ನು ಹೆಚ್ಚಿಸಿಕೊಂಡು, ಸ್ಪಷ್ಟ ಉಚ್ಚಾರಣೆಯೊಂದಿಗೆ ವಾಕ್ಯಬಂಧಗಳನ್ನು ಅರ್ಥಮಾಡಿಕೊಳ್ಳುವುದು.

೪. ಭಾಷೆಯನ್ನು ದೋಷರಹಿತ ಹಾಗೂ ಪರಿಣಾಮಕಾರಿಯಾಗಿ ಬಳಸುವ ಪ್ರೌಢಿಮೆಯನ್ನು ಬೆಳೆಸುವುದು.

೫. ಸೌಂದರ್ಯಪ್ರಜ್ಞೆ, ಕಲ್ಪನೆ ಮತ್ತು ಸೃಜನಾತ್ಮಕ ಭಾವನೆಗಳನ್ನು ಜೀವಂತವಾಗಿರಿಸುವುದು.

೬. ನಾಡು, ನುಡಿ, ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಆತ್ಮೀಯ ಅಭಿಮಾನವನ್ನು ಅಭಿವೃದ್ಧಿಗೊಳಿಸುವುದು.

೭. ನಾಡು, ನುಡಿ, ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಆತ್ಮೀಯ ಅಭಿಮಾನವನ್ನು ವೃದ್ಧಿಗೊಳಿಸುವುದು.

೮. ರಾಷ್ಟ್ರೀಯ ಪ್ರಜ್ಞೆ, ಪ್ರಜಾಪ್ರಭುತ್ವ ಹಾಗೂ ಜೀವನ ಮೌಲ್ಯಗಳನ್ನು ಮುಖ್ಯವಾಗಿ ಗಮನಿಸುವುದು.

೯. ಲಿಂಗ ಸಮಾನತೆ, ಜಾತ್ಯತೀತತೆ, ವಿಶ್ವಶಾಂತಿ, ಸಹಬಾಳ್ವೆ, ಸ್ವಾವಲಂಬನೆ, ಆತ್ಮಗೌರವ ಮೊದಲಾದ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಲು ಪ್ರೇರೇಪಿಸುವುದು.

೧೦. ಪರಿಸರ ಸಂರಕ್ಷಣೆ, ರಾಷ್ಟ್ರೀಯ ಸಾಂಸ್ಕೃತಿಕ ಪರಂಪರೆ ಮತ್ತು ವೈಜ್ಞಾನಿಕ ಮನೋಭಾವವನ್ನು ಸಾಹಿತ್ಯದ ಮೂಲಕ ಪರಿಚಯಿಸುವುದು.

ಛಂದಸ್ಸು, ಅಲಂಕಾರಗಳನ್ನು ಆಯಾ ಪಾಠದ ಬೋಧನಾ ಸಂದರ್ಭದಲ್ಲಿ ಕ್ರಿಯಾತ್ಮಕವಾಗಿ ಕಲಿಸುವುದು.

ಪ್ರಸ್ತುತ ಪಠ್ಯವನ್ನು ಈ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿ ರೂಪಿಸಲು ಪ್ರಯತ್ನ ಮಾಡಲಾಗಿದೆ. ಈ ಎಲ್ಲ ಸಾಮರ್ಥ್ಯಗಳನ್ನು ಬೆಳೆಸಲು ಅಗತ್ಯವಾದ ಗರಿಷ್ಠಮಟ್ಟದ ಅಭ್ಯಾಸಗಳನ್ನು ಕೊಡುವುದು ಒಂದು ಪಠ್ಯದ ದೃಷ್ಟಿಯಿಂದ ಅಸಾಧ್ಯ. ಹಾಗಾಗಿ ಸಾಧ್ಯವಾದಷ್ಟೂ ಮಟ್ಟಿಗೆ ಅಭ್ಯಾಸಗಳನ್ನು ಉದಾಹರಣೆಯ ರೂಪದಲ್ಲಿ ಕೊಡಲಾಗಿದೆ.

ಮಕ್ಕಳನ್ನು ಭಾಷಾಕೌಶಲಗಳ ಪ್ರಕ್ರಿಯೆಗೆ ಒಳಗುಮಾಡುವುದರಿಂದ ಮಾತ್ರ ಅವರಲ್ಲಿ ಭಾಷೆಯನ್ನು ಬೆಳೆಸಬಹುದು. ಓದುವುದನ್ನು ಓದುವುದರಿಂದ, ಬರೆಯುವುದನ್ನು ಬರೆಯುವುದರಿಂದ, ಮಾತನಾಡುವುದನ್ನು ಮಾತನಾಡುವುದರಿಂದ ಮಾತ್ರ ಗಳಿಸಿಕೊಳ್ಳಲು ಸಾಧ್ಯ. ಇಡೀ ತರಗತಿಯ ಸನ್ನಿವೇಶದಲ್ಲಿ ಈ ಕೌಶಲಗಳಿಗೆ ಮಹತ್ವ ಕೊಟ್ಟು ಬೋಧಿಸಬೇಕಾಗುತ್ತದೆ.

ಈ ಪಠ್ಯದ ಸನ್ನಿವೇಶದಲ್ಲಿ ಮತ್ತೊಂದು ಅಂಶ ಗಮನಾರ್ಹ. ಮೂರನೇ ಭಾಷೆಯಾಗಿ ಕನ್ನಡವನ್ನು ಆಯ್ಕೆಮಾಡಿಕೊಂಡ ಎಲ್ಲ ಮಕ್ಕಳ ಭಾಷಾಜ್ಞಾನ ಒಂದೇ ಮಟ್ಟದಲ್ಲಿರುವುದಿಲ್ಲ. ಆಯಾ ಮಟ್ಟದ ಮಕ್ಕಳಿಗೆ ಅಗತ್ಯವಾದ ಕಲಿಕೆಯ ಅನುಭವಗಳನ್ನು ಅಧ್ಯಾಪಕರು ಔಚಿತ್ಯಪೂರ್ಣವಾಗಿ ಆಯ್ಕೆ ಮಾಡಿಕೊಳ್ಳಬೇಕು. ಇಲ್ಲಿ ಕೊಟ್ಟಿರುವ ಎಲ್ಲ ಅಭ್ಯಾಸಗಳನ್ನೂ ಎಲ್ಲ ಶಾಲೆಗಳಲ್ಲೂ ಕಡ್ಡಾಯವಾಗಿ ಕಲಿಸಲೇಬೇಕೆಂದಲ್ಲ. ಅಧ್ಯಾಪಕರಿಗೆ ಸುಲಭವಾಗಲಿ ಎಂಬ ದೃಷ್ಟಿಯಿಂದ ಹಲವಾರು ಅಭ್ಯಾಸಗಳನ್ನು ಕೊಡಲಾಗಿದೆ. ಈ ತರಗತಿಗೆ ಪ್ರವೇಶಿಸುವ ವಿದ್ಯಾರ್ಥಿಗಳು ಈಗಾಗಲೇ ಎರಡು ವರ್ಷಗಳ ಕಾಲ ಕನ್ನಡವನ್ನು ಕಲಿತಿರುತ್ತಾರೆ ಎಂಬ ಅಂಶವನ್ನೂ ಅವರೆಲ್ಲರೂ ಕನ್ನಡ ಪ್ರಾದೇಶಿಕ ಭಾಷೆಯಾಗಿ ಹೊಂದಿದ ವಾತಾವರಣವನ್ನು ಹೊಂದಿರುತ್ತಾರೆ ಎಂಬ ವಿಷಯವನ್ನೂ ಇಲ್ಲಿ ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಹಾಗಾಗಿ ಕ್ಲಿಷ್ಟಪದಗಳಿಲ್ಲದ, ಹೆಚ್ಚು ವಿಜಾತೀಯ ಒತ್ತಕ್ಷರಗಳಿಲ್ಲದ ಪದಗಳನ್ನುಳ್ಳ ಪಾಠಗಳನ್ನು ಆರಿಸಲು ಗಮನಕೊಡಲಾಗಿದೆ. ವ್ಯಾಕರಣವನ್ನು ನಿಯಮಬದ್ಧತೆಗಿಂತ ಬಳಕೆಗೆ ಹೆಚ್ಚು ಒತ್ತುಕೊಟ್ಟು ಹೇಳಿಕೊಡುವುದರಿಂದ ಮೂರನೇ ಭಾಷೆಯಾಗಿ ಕಲಿಯುವವರಿಗೆ ಹೆಚ್ಚು ಸುಲಭವೂ ಉಪಯುಕ್ತವೂ ಆಗುತ್ತದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ನಮ್ಮ ಪ್ರಯತ್ನ ಸಾರ್ಥಕವಾಗುತ್ತದೆ ಎಂದು ನಂಬಿದ್ದೇವೆ.

ನಮ್ಮ ಪಠ್ಯಪುಸ್ತಕ ರಚನಾ ಸಮಿತಿಯ ಸದಸ್ಯರಿಗೆ ಈ ಒಂದು ಅವಕಾಶವನ್ನು ಮಾಡಿಕೊಟ್ಟ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಅಧಿಕಾರಿವರ್ಗದವರಿಗೆ, ವಿಶೇಷವಾಗಿ, ಈ ಕಾರ್ಯದ ಸಂಯೋಜಕರಾದ ಶ್ರೀ ಮೂಡಂಬಡಿತ್ತಾಯ ಹಾಗೂ ಶ್ರೀ ಪಾಂಡುರಂಗ ಅವರಿಗೆ ಕೃತಜ್ಞತೆಗಳು.

ನನ್ನ ಜೊತೆಗೆ ಅತ್ಯಂತ ಶ್ರದ್ಧೆ, ಆಸಕ್ತಿಗಳಿಂದ ಕಾಳಜಿ ವಹಿಸಿ ಈ ಪಠ್ಯಪುಸ್ತಕ ರಚನೆಯಲ್ಲಿ ಸಹಕರಿಸಿದ ಎಲ್ಲ ಸದಸ್ಯರಿಗೂ ಪರಿಶೀಲಕರಿಗೂ ಹಾಗೂ ಕಲಾವಿದರಿಗೂ ನನ್ನ ವೈಯಕ್ತಿಕ ಧನ್ಯವಾದಗಳು.

**ಡಾ॥ ಎ. ಶಶಿಕಲ**
ಅಧ್ಯಕ್ಷರು
ಪಠ್ಯಪುಸ್ತಕ ರಚನಾ ಸಮಿತಿ

# ಪರಿವಿಡಿ


| ಕ್ರ.ಸಂ. | ಪಾಠ / ಪದ್ಯ | ಲೇಖಕರು | ಪುಟ ಸಂಖ್ಯೆ |
|---|---|---|---|
| ೧. | ಕಾಮನ ಬಿಲ್ಲು ಕಮಾನು ಕಟ್ಟಿದೆ (ಪದ್ಯ) | ಕುವೆಂಪು | ೧ |
| ೨. | ಆಸರೆ (ಗದ್ಯ) | ಹ ಮ ಪೂಜಾರ | ೬ |
| ೩. | ಕನ್ನಡದ ಕಹಳೆ ಮೊಳಗಲಿ (ಪದ್ಯ) | ಬಸವರಾಜ ಸಬರದ | ೧೩ |
| ೪. | ಭಲೇ ಬಿಂದು (ಗದ್ಯ) | ಬಿ ಬೋರೇಗೌಡ | ೧೭ |
| ೫. | ವೀರಪುತ್ರರು (ಪದ್ಯ) | ಡಿ ವಿ ಬಡಿಗೇರ | ೨೨ |
| ೬. | ಬಾಲ್ಯದ ನೆನೆಪುಗಳು (ಗದ್ಯ) | ಶಿವರಾಮ ಕಾರಂತ | ೨೫ |
| ೭. | ನೆನಪಿದೆಯೆ ನಿನಗೆ? (ಪದ್ಯ) | ಜಿ ಎಸ್ ಶಿವರುದ್ರಪ್ಪ | ೩೧ |
| ೮. | ಚಿನ್ನದ ಗೊಂಬೆಗಳು (ಗದ್ಯ) | ನಲಿ– ಕಲಿ ಸಾಹಿತ್ಯ | ೩೬ |
| ೯. | ಮಳೆಯ ಹಾಡು (ಪದ್ಯ) | ಸಂಧ್ಯಾರೆಡ್ಡಿ ಕೆ ಸಿ | ೪೦ |
| ೧೦. | ಮಾಸ್ತಿಯವರ ಮಾತೃಪ್ರೇಮ (ಗದ್ಯ) | ಬೆಳಗೆರೆ ಕೃಷ್ಣಶಾಸ್ತ್ರಿ | ೪೨ |
| ೧೧. | ತವರು (ಪದ್ಯ) | ಜನಪದ ಸಾಹಿತ್ಯ | ೪೮ |
| ೧೨. | ಕರ್ಚೀಫ್ ಮಹಿಮೆ (ಗದ್ಯ) | ಜಯಪ್ರಕಾಶ್ ಅಬ್ಬಿಗೆರೆ | ೫೧ |
| ೧೩. | ಅಜ್ಜನ ತೋಟ (ಗದ್ಯ) | ಕೆ ಸಿ ಶಶಿಧರ | ೫೭ |
| ೧೪. | ಬಾದಾಮಿ (ಗದ್ಯ) | ಬಾ ರಾ ಗೋಪಾಲ | ೬೩ |
| ೧೫. | ಬಿಡು ಭ್ರಮೆಯ (ಪದ್ಯ) | ಬಿ.ಟಿ. ಲಲಿತಾನಾಯಕ್ | ೬೮ |
| | ವ್ಯಾಕರಣ | | ೭೦ |
| | ಪತ್ರಲೇಖನ, ಪ್ರಬಂಧ ಮತ್ತು ಗಾದೆಗಳ ವಿಸ್ತರಣೆ | | ೭೭ |
| | ಅರ್ಥಸಹಿತ ಪದಕೋಶ | | ೮೪ |

# ೧. ಕಾಮನ ಬಿಲ್ಲು ಕಮಾನು ಕಟ್ಟಿದೆ (ಪದ್ಯ)

– ಕುವೆಂಪು

**ಆಶಯ:** ನಿಸರ್ಗ ಕವಿಗಳಿಗೆ ಸ್ಫೂರ್ತಿಯ ಆಗರ. ಪ್ರಕೃತಿಯ ಅನೇಕ ಅಂಶಗಳನ್ನು ನಮ್ಮ ಕವಿಗಳು ತೆರೆದಿಟ್ಟಿದ್ದಾರೆ. ಆಕಾಶ, ಸೂರ್ಯ, ನದಿ, ಸಮುದ್ರ, ಕೆರೆ, ಬೆಟ್ಟ – ಗುಡ್ಡ, ತೋಟ, ಕಾಡು–ಮೇಡು ಇವುಗಳನ್ನು ಕಂಡ ಕವಿಯ ಮನಸ್ಸು ಗರಿಗೆದರುತ್ತದೆ. ಇದೇ ರೀತಿ ಪ್ರಕೃತಿಯ ಒಂದು ಅಚ್ಚರಿಯ ಅಂಶ ಮಳೆಗಾಲದಲ್ಲಿ ಆಕಸ್ಮಿಕವಾಗಿ ಹುಟ್ಟುವ ಕಾಮನಬಿಲ್ಲು. ಏಳುಬಣ್ಣಗಳಿಂದ ಕೂಡಿದ ಇದು ಭೂಮಿಗೂ ಆಕಾಶಕ್ಕೂ ಸೇತುವೆ ನಿರ್ಮಿಸುವ ರೀತಿ ಆಕರ್ಷಕವಾದುದು. ಈ ನೋಟವು ಯಾರನ್ನೇ ಆದರೂ ಕುಣಿದು ಕುಪ್ಪಳಿಸುವಂತೆ ಮಾಡುತ್ತದೆ. ಬಿಲ್ಲಿನಾಕಾರದ ಈ ಮಳೆಬಿಲ್ಲಿನ ಮನಮೋಹಕ ವೈಚಿತ್ರ್ಯಗಳನ್ನು ಪ್ರಸ್ತುತ ಕವನ ತೆರೆದಿಡುತ್ತದೆ.

ಕಾಮನ ಬಿಲ್ಲು ಕಮಾನು ಕಟ್ಟಿದೆ
ಮೋಡದ ನಾಡಿನ ಬಾಗಿಲಿಗೆ!

ಬಣ್ಣಗಳೇಳನು ತೋರಣ ಮಾಡಿದೆ,
ಕಂದನ ಕಣ್ಣಿಗೆ ಚಂದವನೂಡಿದೆ.
ಹಣ್ಣಿನ ಹೂವಿನ ಹೊನ್ನನು ಕೂಡಿದೆ;
ಮಕ್ಕಳಿಗೋಕುಳಿಯಾಟವನಾಡಿದೆ.





ತೆಂಗಿನ ತೋಟದ ಬುಡದಲಿ ಮೂಡಿದೆ;
ಭೂಮಿಗೆ ಬಾನಿಗೆ ಸೇತುವೆ ಹೂಡಿದೆ.

ಕಾಮನ ಬಿಲ್ಲು ಕಮಾನು ಕಟ್ಟಿದೆ;
ಮೋಡದ ನಾಡಿನ ಬಾಗಿಲಿಗೆ!

## ಕವಿ ಪರಿಚಯ:



ಕುವೆಂಪು ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕುಪ್ಪಳಿ ವೆಂಕಟಪ್ಪನವರ ಮಗ ಪುಟ್ಟಪ್ಪನವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳಿಯಲ್ಲಿ ೨೯ನೇ ಡಿಸೆಂಬರ್ ೧೯೦೪ರಂದು ಜನಿಸಿದರು. ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಸಂಸ್ಥಾಪಕರಾಗಿ, ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಇವರು ರಚಿಸಿರುವ 'ಶ್ರೀರಾಮಾಯಣ ದರ್ಶನಂ' ಎಂಬ ಕೃತಿ ಈ ಯುಗದ ಮೇರು ಕೃತಿಯಾಗಿದೆ. ಇವರು ರಚಿಸಿರುವ ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಎಂಬ ಬೃಹತ್ ಕಾದಂಬರಿಗಳು, ನೆನಪಿನ ದೋಣಿಯಲ್ಲಿ ಎಂಬ ಆತ್ಮಕಥನ, ನನ್ನ ಮನೆ, ಕೊಳಲು, ನವಿಲು, ಪ್ರೇಮಕಾಶ್ಮೀರ ಮುಂತಾದ ಕವನ ಸಂಕಲನಗಳು, ಮಹಾರಾತ್ರಿ, ಬೆರಳ್ಗೆ ಕೊರಳ್, ರಕ್ತಾಕ್ಷಿ ಮೊದಲಾದ ನಾಟಕಗಳು ಸಾಹಿತ್ಯಕ್ಷೇತ್ರದಲ್ಲಿ ಪ್ರಸಿದ್ಧಿಪಡೆದಿವೆ.

ಇವರಿಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ, ಕರ್ನಾಟಕ ರತ್ನ ಪ್ರಶಸ್ತಿ, ಪದ್ಮಭೂಷಣ, ಪದ್ಮವಿಭೂಷಣ ಹಾಗೂ ರಾಷ್ಟ್ರಕವಿ ಪ್ರಶಸ್ತಿಗಳು ದೊರೆತಿವೆ.

ಇವರು ೦೯-೧೧-೧೯೯೪ರಲ್ಲಿ ನಿಧನರಾದರು.

***ಈ ಕವನವನ್ನು ಕುವೆಂಪು ಅವರ 'ನನ್ನ ಮನೆ' ಎಂಬ ಕವನಸಂಕಲನದಿಂದ ಆರಿಸಿಕೊಳ್ಳಲಾಗಿದೆ.***

## ಪದಗಳ ಅರ್ಥ

ಬಿಲ್ಲು – ಬಾಣವನ್ನು ಬಿಡಲು ಬಳಸುವ ಸಲಕರಣೆ; ಕಮಾನು – ಅರ್ಧ ಚಂದ್ರಾಕೃತಿಯ ರಚನೆ; ತೋರಣ – ಅಲಂಕಾರಕ್ಕಾಗಿ ಬಾಗಿಲು ಮೊದಲಾದವುಗಳಿಗೆ ಕಟ್ಟುವ ಚಿಗುರು; ಹೊನ್ನು – ಚಿನ್ನ, ಸಂಪತ್ತು; ಓಕುಳಿ – ಉತ್ಸವಕಾಲದಲ್ಲಿ ಸಂತೋಷದಿಂದ ಪರಸ್ಪರ ಮೈಮೇಲೆ ಎರಚುವ ಬಣ್ಣದ ನೀರು; ಬುಡ – ಬೇರಿನ ಭಾಗ; ಬಾನು – ಆಕಾಶ; ಸೇತುವೆ – ನದಿ ಮೊದಲಾದವುಗಳನ್ನು ದಾಟಲು ಕಟ್ಟಿರುವ ರಚನೆ.

## ಕಾಮನಬಿಲ್ಲು :

ಏಳು ಬಣ್ಣಗಳಿಂದ ಕೂಡಿದ್ದು, ಮಳೆಗಾಲದಲ್ಲಿ ಬಾನಿನಲ್ಲಿ ಕಂಡುಬರುವ ಅಪೂರ್ವ ಪ್ರಕೃತಿ ವೈಚಿತ್ರ್ಯ. ನೇರಳೆ, ಕಡುನೀಲಿ, ನೀಲಿ, ಹಸಿರು, ಹಳದಿ, ಕಿತ್ತಳೆ ಮತ್ತು ಕೆಂಪು ಇವೇ ಆ ಏಳು ಬಣ್ಣಗಳು.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಕಾಮನ ಬಿಲ್ಲು ಹೇಗೆ ಕಾಣುತ್ತಿದೆ?

೨. ಏಳು ಬಣ್ಣಗಳಿಂದ ಏನು ಮಾಡಿದೆ?

೩. ಕಾಮನ ಬಿಲ್ಲು ಯಾವುದರಿಂದ ಕೂಡಿದೆ?

೪. ಓಕುಳಿ ಆಟವನ್ನು ಯಾರಿಗಾಗಿ ಆಡಿದೆ?

೫. ಕಾಮನ ಬಿಲ್ಲು ಎಲ್ಲಿ ಮೂಡಿದೆ?

೬. ಕುವೆಂಪು ಅವರ ಪೂರ್ಣ ಹೆಸರೇನು?

**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು/ ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ಕಾಮನ ಬಿಲ್ಲು ಕಂದನ ಕಣ್ಣಿಗೆ ಹೇಗೆ ಚಂದವನೂಡಿದೆ?

೨. ಭೂಮಿಗೆ ಬಾನಿಗೆ ಸೇತುವೆ ಯಾವುದು? ಹೇಗೆ?

೩. ಕುವೆಂಪು ಅವರಿಗೆ ದೊರೆತ ಪ್ರಶಸ್ತಿಗಳು ಯಾವುವು?

**ಇ. ಪ್ರಕೃತಿ ವೈಚಿತ್ರ್ಯದ ಕೆಳಗಿನ ಚಿತ್ರಗಳನ್ನು ನೋಡಿ ಒಂದು ಅಥವಾ ಎರಡು ವಾಕ್ಯಗಳನ್ನು ಬರೆದು ನಿಮ್ಮ ಗೆಳೆಯರೊಡನೆ ಹಂಚಿಕೊಳ್ಳಿ.**



ಕೊಳ



ಚಿಟ್ಟೆ

**ಈ. ಕೆಳಗಿನ ಪದಗಳಿಗೆ ಪದ್ಯದಲ್ಲಿ ಕಾಣುವ ಪ್ರಾಸಪದಗಳನ್ನು ಗುರುತಿಸಿ**

ಮಾಡಿದೆ, ಕೂಡಿದೆ, ಮೂಡಿದೆ

**ಉ. ಕೆಳಗಿನ ಪದಗಳಿಗೆ ಪ್ರಾಸಪದಗಳನ್ನು ಆಲೋಚಿಸಿ ಬರೆಯಿರಿ**

*ಉದಾ: ತೋರಣ-ಹೂರಣ*

ಹಣ್ಣಿನ, ತೋಟ, ಮೋಡ, ನಾಡು.

**ಊ.ಕೆಳಗಿನ ಅರ್ಥಕೊಡುವ ಪದ್ಯದ ಸಾಲುಗಳನ್ನು ಕಂಡುಹಿಡಿದು ಬರೆಯಿರಿ.**

ಕಾಮನ ಬಿಲ್ಲು ಏಳು ಬಣ್ಣಗಳಿಂದ ತೋರಣವನ್ನೇ ಕಟ್ಟಿದೆ.

ಮಕ್ಕಳಿಗೆ ಬಣ್ಣದ ನೀರಿನ ಆಟವನ್ನು ಆಡಿದೆ.

**ಋ. ಬಿಡಿಸಿ ಬರೆದಿರುವ ಪದಗಳನ್ನು ಕೂಡಿಸಿ ಬರೆಯಿರಿ**

*ಉದಾ: ಬಣ್ಣಗಳು + ಏಳನು – ಬಣ್ಣಗಳೇಳನು*

ಚಂದವನು+ಊಡಿದೆ, ಹೊನ್ನು+ಅನು, ಮಕ್ಕಳಿಗೆ+ಓಕುಳಿ, ಆಟವನು+ಆಡಿದೆ.

**ೠ. 'ಅ' ಮತ್ತು 'ಬ' ಪಟ್ಟಿಯಲ್ಲಿ ಪದ್ಯದ ಸಾಲುಗಳನ್ನು ಬಿಡಿಸಿ ಕೊಟ್ಟಿದೆ. ಅವುಗಳನ್ನು ಪದ್ಯದಲ್ಲಿರುವಂತೆ ಸೇರಿಸಿ ಬರೆಯಿರಿ.**

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ತೆಂಗಿನ ತೋಟದ | ತೋರಣ ಮಾಡಿದೆ |
| ಮೋಡದ ನಾಡಿನ | ಆಟವನಾಡಿದೆ |
| ಮಕ್ಕಳಿಗೋಕುಳಿ | ಬಾಗಿಲಿಗೆ |
| ಬಣ್ಣಗಳೇಳನು | ಬುಡದಲಿ ಮೂಡಿದೆ |

**ಎ. ಕುವೆಂಪು ಅವರು ರಚಿಸಿರುವ ಒಂದು ಕಾವ್ಯಸಂಗ್ರಹ, ಒಂದು ನಾಟಕ, ಒಂದು ಮಕ್ಕಳ ಪುಸ್ತಕವನ್ನು ಹೆಸರಿಸಿ**

## – ಪ್ರಾಯೋಗಿಕ ಚಟುವಟಿಕೆ –

**೧. ಕೆಳಗಿನ ಪದಗಳನ್ನು ಗಟ್ಟಿಯಾಗಿ ಹೇಳಿರಿ**

ಕಾಮನ ಬಿಲ್ಲು, ಬಣ್ಣಗಳೇಳು, ಓಕುಳಿಯಾಟ, ತೆಂಗಿನ ತೋಟ, ಮೋಡದ ನಾಡು

**೨. ನೀವು ನೋಡಿರುವ ಕಾಮನಬಿಲ್ಲನ್ನು ತರಗತಿಯಲ್ಲಿ ವಿವರಿಸಿ ಹೇಳಿರಿ**

೩. **ಈ ಕೆಳಗಿನ ಚಿತ್ರಕ್ಕೆ ಆಶ್ಚರ್ಯ ಸೂಚಕ ಅಥವಾ ಪೂರ್ಣವಿರಾಮ ಚಿಹ್ನೆ ಹಾಕಬಹುದಾದ ಎರಡು ವಾಕ್ಯಗಳನ್ನು ರಚಿಸಿ ತರಗತಿಯಲ್ಲಿ ಹಂಚಿಕೊಳ್ಳಿ.**

*ಉದಾ: ಈ ಮುದ್ದು ಹಕ್ಕಿಗೆ ಎರಡು ಕಾಲುಗಳಿವೆ.*



೪. **'ಮೋಡದ ನಾಡಿನ ಬಾಗಿಲಿಗೆ' – ಎಂಬಲ್ಲಿ ಕವಿ ಆಶ್ಚರ್ಯಸೂಚಕವನ್ನು ಬಳಸಿರುವುದನ್ನು ಗಮನಿಸಿ. ಹೀಗೆಯೇ ಕೆಳಗಿನ ವಾಕ್ಯಗಳಿಗೆ ಸರಿಯಾದ ಲೇಖನ ಚಿಹ್ನೆಗಳನ್ನು ಹಾಕಿರಿ.**

ಇದು ಎಷ್ಟು ಅದ್ಭುತವಾದ ಕಟ್ಟಡ

ಅಯ್ಯೋ ಇದೇಕೆ ಹೀಗಾಯಿತು






✤ ✤ ✤ ✤ ✤

# ೨. ಆಸರೆ (ಗದ್ಯ)

**– ಹ ಮ ಪೂಜಾರ**

**ಆಶಯ:** ಮಾನವನು ಪ್ರಕೃತಿಯ ಕೂಸು. ಪ್ರಕೃತಿಯನ್ನು ನಾಶಗೊಳಿಸದೆ ಅದನ್ನು ಬೆಳೆಸಿ ಉಳಿಸಬೇಕು. ಇದರಿಂದ ಮಾತ್ರ ಮಾನವ ಸುಖವಾಗಿ ಬಾಳಬಹುದು. ಈ ಪ್ರಕೃತಿ ನಮಗೆ ಮಾತ್ರ ಸೀಮಿತವಲ್ಲ. ಭೂಮಿಯ ಮೇಲಿರುವ ಮರ, ಗಿಡ, ಮಣ್ಣು, ಕಲ್ಲು, ಪ್ರಾಣಿ, ಪಕ್ಷಿ ಇವೆಲ್ಲವೂ ಬದುಕಬೇಕು. 'ಬದುಕಬೇಕು, ಬದುಕಬಿಡಬೇಕು' ಎಂಬ ತತ್ವದಂತೆ ಮಾನವ ಪರಿಸರಸ್ನೇಹಿಯಾಗಿ ಬೆಳೆಯಬೇಕು. ಪ್ರಾಣಿಗಳಿಗೂ ಬಾಳಲು ಆಸರೆ ನೀಡಬೇಕು. ಮರಗಿಡಗಳನ್ನು ರಕ್ಷಿಸುವುದು ಮಾತ್ರವಲ್ಲ; ಹೊಸದಾಗಿ ನೆಟ್ಟು ಬೆಳೆಸಬೇಕು. ಜಗತ್ತಿನ ಸೌಂದರ್ಯಕ್ಕೆ ಕಾರಣವಾದ ವಿವಿಧ ಪಕ್ಷಿಗಳಿಗೆ ಮರವೇ ಆಸರೆಯಾಗಿದೆ. ಅಂತಹ ಮರಗಳನ್ನು ನಾಶಮಾಡದೆ ರಕ್ಷಿಸಬೇಕು. ಆ ಮೂಲಕ ಪರಿಸರವನ್ನು ಹಸನಾಗಿಸಬೇಕು ಎಂಬುದೇ ಈ ಪಾಠದ ಆಶಯವಾಗಿದೆ.

ರಾಮನಹಳ್ಳಿಯ ಕೆರೆಗೆ ಹೊಂದಿಕೊಂಡಿರುವ ವಿಶಾಲವಾದ ಮೈದಾನವು ಹಚ್ಚಹಸುರಾದ ಹುಲ್ಲಿನಿಂದ ಸುಂದರವಾಗಿ ಕಾಣುತ್ತಿತ್ತು. ಕೆರೆಯ ದಡದಲ್ಲಿ ಅನೇಕ ಮರಗಳು ಬೆಳೆದಿದ್ದವು. ಆ ಮರಗಳಲ್ಲಿ ವಿವಿಧ ಪಕ್ಷಿಗಳು ಆಸರೆ ಪಡೆದಿದ್ದವು.

ಕೆರೆಯ ಮೈದಾನಕ್ಕೆ ಆಡಲು ಬರುವ ಮಕ್ಕಳು ಅಲ್ಲಿಯ ಮರಗಳನ್ನು, ಪಕ್ಷಿಗಳನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಮಕ್ಕಳು ವನಭೋಜನಕ್ಕೆಂದು ಮೈದಾನಕ್ಕೆ ಬಂದಾಗ ತಮ್ಮ ತಿಂಡಿ ತಿನಿಸುಗಳನ್ನು ಹಕ್ಕಿಗಳೊಂದಿಗೆ ಹಂಚಿಕೊಂಡು ತಿಂದರೆ, ಹಕ್ಕಿಗಳು ಮರಗಳಿಂದ ವಿವಿಧ ಫಲಪುಷ್ಪಗಳನ್ನು ಕಡಿದೊಗೆದು ಮಕ್ಕಳೊಂದಿಗೆ ಹಂಚಿಕೊಳ್ಳುತ್ತಿದ್ದವು.



ಅದೇ ಊರಲ್ಲಿ ಕಾಶೀಮನೆಂಬ ಒಬ್ಬ ಮರ ಕಡಿಯುವವನಿದ್ದ. ಅವನು ದಿನಾಲೂ ಅಡವಿಗೆ ಹೋಗಿ ಮರ ಕಡಿದು ಮಾರುತ್ತಿದ್ದ. ಒಂದು ದಿನ ಅವನು ಮರಕಡಿಯಲು ಬಹುದೂರ ಹೋಗದೆ ಈ ಕೆರೆಯ ಆ ದಡದ ಒಂದು ಗಿಡವನ್ನು ಕಡಿಯಬೇಕೆಂದು ವಿಚಾರಿಸಿ, ಕೊಡಲಿಯನ್ನು ತೆಗೆದುಕೊಂಡು ದಡವನ್ನು ಸೇರಿದ.

ಕೆರೆಯ ದಡದ ಒಂದು ಗಿಡಕ್ಕೆ ಕಾಶೀಮನು ಕೊಡಲಿಯ ಏಟನ್ನು ಹಾಕಿದ. ಕೊಡಲಿಯ ಹೊಡೆತದ ಶಬ್ದ ಕೇಳಿ ಗಿಡದಲ್ಲಿಯ ಪಕ್ಷಿಗಳೆಲ್ಲ ಹೌಹಾರಿ ಚಿಂವ್ ಚಿಂವ್ ಎಂದು ಕಿರುಚುತ್ತಾ ಹಾರಾಡತೊಡಗಿದವು. ಕಾಶೀಮನು ಮತ್ತೊಂದು ಕೊಡಲಿಯ ಏಟನ್ನು ಹಾಕಿದಾಗ, ಪಕ್ಷಿಗಳು ಕಿರುಚುತ್ತಾ ಅವನ ಸುತ್ತ ಮತ್ತು ಗಿಡದ ಸುತ್ತ ಹಾರಾಡತೊಡಗಿದವು. "ನಮ್ಮ ಆಸರೆಯನ್ನು ದಯವಿಟ್ಟು ಹಾಳುಮಾಡಬೇಡ" ಎಂದು ಕೂಗಿ ಕೂಗಿ ವಿನಂತಿಸುವಂತಿತ್ತು ಆ ದೃಶ್ಯ.

ಪಕ್ಷಿಗಳ ಕೂಗನ್ನು ಲಕ್ಷಿಸದೇ ಕಾಶೀಮನು ಮತ್ತೊಂದು ಏಟನ್ನು ಗಿಡಕ್ಕೆ ಹಾಕಿದಾಗ, ಆ ಗಿಡದಲ್ಲಿ ಆಸರೆ ಪಡೆದ ಪಕ್ಷಿಗಳ ಕಿರುಚಾಟ ಹೆಚ್ಚಾಯಿತಲ್ಲದೆ ಬೇರೆ ಗಿಡಗಳಲ್ಲಿಯ ಪಕ್ಷಿಗಳೂ ಇವುಗಳಿಗೆ ಸಹಾಯಮಾಡಲೆಂಬಂತೆ ಬಂದವು. ಬಂದ ಪಕ್ಷಿಗಳೆಲ್ಲಾ ಇವುಗಳ ಜೊತೆ ಸೇರಿ ಹಾರಾಡಿ ಕಿರುಚತೊಡಗಿದವು.

ಕೆರೆಯ ಮೈದಾನದ ಇನ್ನೊಂದು ಮೂಲೆಯಲ್ಲಿ ಆಡುತ್ತಿದ್ದ ಮಕ್ಕಳ ಕಿವಿಗೆ ಈ ಪಕ್ಷಿಗಳ ಕಿರುಚಾಟ ತಲುಪಿತು. "ನಮ್ಮ ಪ್ರೀತಿಯ ಪಕ್ಷಿಗಳಿಗೆ ಏನೋ ಅಪಾಯ ಬಂದೊದಗಿದೆ" ಎಂದು ಅಂದುಕೊಂಡು, ಪಕ್ಷಿಗಳ ಧ್ವನಿ ಬಂದತ್ತ ಮಕ್ಕಳು ಓಡಿದರು.

ಕಾಶೀಮನು ಕೊಡಲಿ ಹಿಡಿದು ನಿಂತಿರುವ ಹಾಗೂ ಪಕ್ಷಿಗಳು ಕಿರಿಚುತ್ತ ಹಾರಾಡುವ ದೃಶ್ಯ ಕಂಡ ಮಕ್ಕಳ ಮನ ಮಿಡಿಯಿತು. "ಗಿಡವನ್ನು ಕಡಿಯಕೂಡದು" ಎಂದು ಮಕ್ಕಳು ಕಾಶೀಮನಲ್ಲಿ ವಿನಂತಿಸಿದರು.



ಮಕ್ಕಳ ವಿನಂತಿಯನ್ನು ಮನ್ನಿಸದ ಕಾಶೀಮನು "ನಾನು ಸ್ವತಂತ್ರನು, ಈ ಗಿಡವನ್ನು ಕಡಿಯದೇ ಬಿಡಲಾರೆ, ಕೇಳುವವರು ನೀವು ಯಾರು? ಇಲ್ಲಿಂದ ತೊಲಗಿ" ಎಂದು ಮಕ್ಕಳನ್ನು ಗದರಿಸಿದನು. ಅವನು ಮತ್ತೆ ಕೊಡಲಿ ಎತ್ತುವಷ್ಟರಲ್ಲಿ ಎಲ್ಲಾ ಮಕ್ಕಳು ಕೈ ಜೋಡಿಸಿ ದೈನ್ಯದಿಂದ ಬೇಡಿಕೊಂಡರು.

"ಓಹೋ! ಮಕ್ಕಳು ಈಗಂತೂ ನನಗೆ ಗಿಡವನ್ನು ಕಡಿಯಲು ಬಿಟ್ಟುಕೊಡುವುದಿಲ್ಲ. ಯಾರೂ ಇಲ್ಲದ ಸಮಯ ಸಾಧಿಸಿ ಗಿಡ ಕಡಿದರಾಯಿತು" ಎಂದುಕೊಂಡ ಕಾಶೀಮನು "ಮಕ್ಕಳೆ, ನಿಮ್ಮ ಮನದಿಚ್ಛೆಯಂತಾಗಲಿ, ನಾನು ಗಿಡವನ್ನು ಕಡಿಯುವುದಿಲ್ಲ" ಎಂದು ತೋರಿಕೆಗೆ ಮಾತ್ರ ಹೇಳಿ ಮಕ್ಕಳನ್ನು ಸಮಾಧಾನಪಡಿಸಿದನು.

ಗಿಡವನ್ನುಳಿಸಿ ಪಕ್ಷಿಗಳ ಗೂಡುಗಳನ್ನು ರಕ್ಷಿಸಿದ ಸಂತೋಷದ ಭರದಲ್ಲಿ ಮಕ್ಕಳೆಲ್ಲ ಕುಣಿದು ಕುಪ್ಪಳಿಸಿದರು. ಎಲ್ಲಾ ಪಕ್ಷಿಗಳೂ ಹಾರಾಡಿ, ಸಮಾಧಾನಗೊಂಡು ತಮ್ಮ ತಮ್ಮ ಗೂಡು ಸೇರಿದವು.

ಊರು ಸಮೀಪಿಸುತ್ತಿದ್ದಂತೆ, ಕಾಶೀಮನ ಮನೆಗೆ ಆಕಸ್ಮಿಕ ಬೆಂಕಿ ತಗುಲಿದ ಸುದ್ದಿ ಕಿವಿಗೆ ಬಿದ್ದಿತು. ಕೂಡಲೇ ಆತನು ಓಡತೊಡಗಿದನು. ಸುದ್ದಿ ಕೇಳಿದ ಮಕ್ಕಳೂ ಅವನ ಹಿಂದೆಯೇ ಓಡಿದರು.

ಮನೆ ಸಮೀಪಿಸುತ್ತಿದ್ದಂತೆಯೇ "ಬೆಂಕಿ! ಬೆಂಕಿ! ನಮ್ಮ ಮನೆ ಉಳಿಸಿ" ಎಂದು ರೋದಿಸುತ್ತ ಓಡಾಡುತ್ತಿರುವ ಹೆಂಡತಿ ಮಕ್ಕಳನ್ನು ಕಂಡ ಕಾಶೀಮನಿಗೆ ಗಿಡ ಕಡಿಯುವಾಗ ತನ್ನ ಸುತ್ತ ಹಾಗೂ ಗಿಡದ ಸುತ್ತ ಕಿರುಚುತ್ತ ಹಾರಾಡಿದ ಪಕ್ಷಿಗಳ ಸ್ಪಷ್ಟಚಿತ್ರ ಕಣ್ಮುಂದೆ ಕಟ್ಟಿದಂತಾಯಿತು. "ಇಲ್ಲ!ಇಲ್ಲ! ಇನ್ನೆಂದೂ ನಾನು ಗಿಡಗಳನ್ನು ಕಡಿಯುವುದಿಲ್ಲ" ಎಂದು ಚಿಟ್ಟನೆ ಚೀರಿ ರೋದಿಸತೊಡಗಿದನು.

ಕಾಶೀಮನನ್ನೇ ಹಿಂಬಾಲಿಸಿ ಓಡಿ ಬಂದ ಮಕ್ಕಳು ಸ್ಥಿತಿಯನ್ನರಿತು ಕೂಡಲೆ ಕೆಲವರು ತಮ್ಮ ಕೈಗೆ ಸಿಕ್ಕ ಪಾತ್ರೆಗಳನ್ನು ತೆಗೆದುಕೊಂಡು ನೀರನ್ನು ತಂದು ಬೆಂಕಿಯ ಮೇಲೆ ಉಗ್ಗಿದರು. ಇನ್ನು ಕೆಲವು ಮಕ್ಕಳು ಬೆಂಕಿಯ ಮೇಲೆ ಮಣ್ಣನ್ನೂ ಉಸುಕನ್ನೂ ಉಗ್ಗಿದರು. ಹೀಗೆ ಎಲ್ಲಾ ಮಕ್ಕಳು ಹಾಗೂ ನೆರೆಹೊರೆಯವರು ಸೇರಿ ಬೆಂಕಿಯಿಂದಾಗಬಹುದಾದ ಅನಾಹುತವನ್ನು ತಪ್ಪಿಸಿದರು. ಕಾಶೀಮನ ಮನೆಯನ್ನು ರಕ್ಷಿಸಿದರು.

ತನ್ನ ಮನೆಯನ್ನು ರಕ್ಷಿಸುವಲ್ಲಿ ಮಕ್ಕಳು ಶ್ರಮಪಟ್ಟದ್ದನ್ನು ಕಣ್ಣಾರೆ ಕಂಡ ಕಾಶೀಮನ ಹೃದಯ ತುಂಬಿ ಬಂದು "ಮಕ್ಕಳೇ ಇನ್ನೆಂದೂ ನಾನು ಮರಗಳನ್ನು ಕಡಿಯುವುದಿಲ್ಲ" ಎಂದು ಮಕ್ಕಳೆದುರಿನಲ್ಲಿಯೇ ಅವನು ಪ್ರತಿಜ್ಞೆ ಮಾಡಿದನು.



**ಲೇಖಕರ ಪರಿಚಯ :**



ಹ ಮ ಪೂಜಾರ ಅವರ ಪೂರ್ಣ ಹೆಸರು ಹನುಮಂತರಾಯ ಮನ್ನಪ್ಪ ಪೂಜಾರ. ಇವರು ವಿಜಯಾಪುರ(ಬಿಜಾಪುರ) ಜಿಲ್ಲೆಯ ಸಿಂದಗಿಯಲ್ಲಿ ೧೩-೦೩-೧೯೪೩ರಲ್ಲಿ ಜನಿಸಿದರು. ಇವರು ಉತ್ತಮ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಮಕ್ಕಳಿಗಾಗಿ 'ಪರಿಸರ ಕಾವ್ಯ', 'ನೀತಿಯ ಬದುಕು' ಎಂಬ ಕೃತಿಗಳನ್ನೂ ಚನ್ನವೀರಸ್ವಾಮಿಯವರ ಜೀವನಚರಿತ್ರೆ ಮುಂತಾದ ಕೃತಿಗಳನ್ನೂ ರಚಿಸಿರುತ್ತಾರೆ. ಉತ್ತಮ ಶಿಕ್ಷಕರಿಗೆ ಕೊಡಮಾಡುವ ರಾಷ್ಟ್ರಪ್ರಶಸ್ತಿ ಇವರಿಗೆ ಸಂದಿದೆ.

***ಇವರ 'ನೀತಿಯ ಬದುಕು' ಎಂಬ ಕೃತಿಯಿಂದ ಈ ಪಾಠವನ್ನು ಆರಿಸಿಕೊಳ್ಳಲಾಗಿದೆ.***

**ಪದಗಳ ಅರ್ಥ:**

ಕೇಕೆ – ಸಂತಸದ ಕೂಗು; ರಮ್ಯ – ಸುಂದರ; ಹೌಹಾರು – ಭಯಗೊಳ್ಳು; ಲಕ್ಷಿಸು – ಗಮನಿಸು; ದೈನ್ಯ – ದೀನತೆಯ ಭಾವ; ಉಸುಕು– ಮರಳು; ಹೃದಯತುಂಬಿ – ಮನಸಾರೆ; ವಿಚಾರಿಸಿ – ಆಲೋಚಿಸಿ; ಮನ್ನಿಸು – ಒಪ್ಪಿಕೊ; ರೋದಿಸು – ಅಳು; ಅನಾಹುತ – ಅಪಾಯ; ಪ್ರತಿಜ್ಞೆ – ದೃಢ ನಿರ್ಧಾರ.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ರಾಮನಹಳ್ಳಿಯ ಕೆರೆಯ ಮೈದಾನ ಹೇಗಿತ್ತು?

೨. ಹಕ್ಕಿಗಳೊಂದಿಗೆ ಮಕ್ಕಳ ಸಂಬಂಧ ಹೇಗಿತ್ತು?

೩. ಕಾಶೀಮನ ದಿನನಿತ್ಯದ ಕೆಲಸ ಏನಾಗಿತ್ತು?

೪. ಮಕ್ಕಳು ಕಾಶೀಮನಲ್ಲಿ ಏನೆಂದು ಮನವಿ ಮಾಡಿಕೊಂಡರು?

೫. ಕಾಶೀಮನ ಯಾವ ನುಡಿ ಮಕ್ಕಳ ಮನಸ್ಸಿಗೆ ಸಮಾಧಾನ ತಂದಿತು?

೬. ಹ ಮ ಪೂಜಾರರ ಪ್ರಮುಖ ಕೃತಿಗಳು ಯಾವುವು?

೭. ಕಾಶೀಮನು ಏನೆಂದು ಪ್ರತಿಜ್ಞೆ ಮಾಡಿದನು?



**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ರಾಮನ ಹಳ್ಳಿಯ ಕೆರೆಯ ಪರಿಸರವನ್ನು ವಿವರಿಸಿ.

೨. ಮಕ್ಕಳು ಹಕ್ಕಿಗಳ ಕಡೆಗೆ ಏಕೆ ಓಡಿ ಬಂದರು?

೩. ಕಾಶೀಮನು ಮಕ್ಕಳನ್ನು ಏನೆಂದು ಗದರಿಸಿದನು?

೪. ಮನೆಗೆ ಬೆಂಕಿ ಬಿದ್ದಾಗ ಮಕ್ಕಳು ಕಾಶೀಮನಿಗೆ ಹೇಗೆ ಸಹಕರಿಸಿದರು?

೫. ಕಾಶೀಮನು ಮರಕಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಲು ಕಾರಣವೇನು?

**ಇ. ಕೆಳಗಿನ ಪದಗಳಿಗೆ ಕೊಟ್ಟಿರುವ ಉದಾಹರಣೆಗಳನ್ನು ಗಮನಿಸಿಕೊಂಡು, ಇದೇ ಪದಗಳಿಗೆ ಇತರ ಅರ್ಥಪೂರ್ಣ ವಾಕ್ಯಗಳನ್ನು ರಚಿಸಿ.**

೧. ಹೌಹಾರಿ: ಪಕ್ಕದ ಮನೆಯವರು ತಮ್ಮ ಮನೆಯಲ್ಲಿ ಕಸ ಎಸೆದಿರುವುದನ್ನು ನೋಡಿ ರಾಜಣ್ಣ ಹೌಹಾರಿದನು.

೨. ದೈನ್ಯ: ಮಗನನ್ನು ಒಮ್ಮೆ ನೋಡಿಬರುತ್ತೇನೆಂದು ಚಂದ್ರಮತಿ ದೈನ್ಯದಿಂದ ಮನೆಯ ಯಜಮಾನನಲ್ಲಿ ಬೇಡಿದಳು.

೩. ವಿನಂತಿ: ಶಾಲೆಯ ಮಕ್ಕಳ ಆರೋಗ್ಯ ತಪಾಸಣೆ ಮಾಡಬೇಕೆಂದು ಮುಖ್ಯೋಪಾಧ್ಯಾಯರು ವೈದ್ಯರನ್ನು ವಿನಂತಿಸಿಕೊಂಡರು.

**ಈ. ಕೆಳಗಿನ ವಾಕ್ಯಗಳಲ್ಲಿ ಪದಗಳ ಸ್ಥಾನ ಬದಲಾಗಿದೆ. ಅದನ್ನು ಸರಿಪಡಿಸಿ ಬರೆಯಿರಿ**

*ಉದಾ:* ಹಸಿರು ಹುಲ್ಲಿನಿಂದ ರಾಮನಹಳ್ಳಿ ಸುಂದರವಾಗಿ ಕಾಣುತ್ತಿತ್ತು.

ರಾಮನಹಳ್ಳಿ ಹಸಿರು ಹುಲ್ಲಿನಿಂದ ಸುಂದರವಾಗಿ ಕಾಣುತ್ತಿತ್ತು.

೧. ಮರಗಳನ್ನು, ಪಕ್ಷಿಗಳನ್ನು ಮಕ್ಕಳು ಬಹುವಾಗಿ ಪ್ರೀತಿಸುತ್ತಿದ್ದರು.

೨. ಕೊಡಲಿಯನ್ನು ತೆಗೆದುಕೊಂಡು ಕಾಶೀಮನು ಮರದ ಬಳಿಗೆ ತಂದನು.

೩. ಹೆಚ್ಚಾಯಿತು ಪಕ್ಷಿಗಳ ಕಿರುಚಾಟ.

೪. ಕೈ ಜೋಡಿಸಿ ದೈನ್ಯದಿಂದ ಮಕ್ಕಳು ಬೇಡಿಕೊಂಡರು

೫. ಸಂತೋಷದ ಭರದಲ್ಲಿ ಕುಣಿದು ಕುಪ್ಪಳಿಸಿದರು ಮಕ್ಕಳು.

**ಉ. ಕೆಳಗೆ ಪಾಠಕ್ಕೆ ಸಂಬಂಧಿಸಿದ ವಾಕ್ಯಗಳನ್ನು ಕೊಡಲಾಗಿದೆ. ಇವುಗಳನ್ನು ಯಾರು ಯಾರಿಗೆ ಹೇಳಿದರು ಎಂದು ಬರೆಯಿರಿ.**

"ನಮ್ಮ ಆಸರೆಯನ್ನು ದಯವಿಟ್ಟು ಹಾಳುಮಾಡಬೇಡ"

"ನಮ್ಮ ಪ್ರೀತಿಯ ಪಕ್ಷಿಗಳಿಗೆ ಏನೋ ಅಪಾಯಬಂದೊದಗಿದೆ"

"ಗಿಡವನ್ನು ಕಡಿಯಕೂಡದು"

"ಬೆಂಕಿ, ಬೆಂಕಿ ನಮ್ಮ ಮನೆ ಉಳಿಸಿ"

**ಊ. ಈ ಪದಗಳನ್ನು ಬಿಡಿಸಿ ಬರೆಯಿರಿ.**

*ಉದಾ:* ಆಡಲೆಂದು – ಆಡಲು+ ಎಂದು

೧. ಮಕ್ಕಳೆದುರು – ________________

೨. ಮಕ್ಕಳಿಗೆ – ________________

೩. ಮಕ್ಕಳಲ್ಲಿ – ________________

೪. ಮಕ್ಕಳಿಗಾಗಿ – ________________

೫. ಮಕ್ಕಳಿಂದ – ________________

**೩. ಕೆಳಗಿನ ಪದಗಳನ್ನು ಸೇರಿಸಿ ಬರೆಯಿರಿ.**

***ಉದಾ:*** ಆಡುತ್ತಾ+ಇದ್ದ–ಆಡುತ್ತಿದ್ದ

೧. ಏಟು+ಅನ್ನು – ____________

೨. ಇನ್ನು+ಒಂದು – ____________

೩. ಮನೆ+ಅಲ್ಲಿ – ____________

೪. ಶಾಲೆ+ ಗೆ – ____________

೫. ಮನೆ+ಇಂದ – ____________

೬. ಮನದ+ಇಚ್ಛೆ – ____________

**– ಪ್ರಾಯೋಗಿಕ ಚಟುವಟಿಕೆ –**

**೧. ಕೆಳಗಿನ ಪದ್ಯವನ್ನು ತರಗತಿಯಲ್ಲಿ ಗುಂಪಾಗಿ ಗಟ್ಟಿಯಾಗಿ ಓದಿರಿ**

ಗಿಡವು ಮರವು ತುಂಬಿಕೊಂಡ
ಕಾಡು ಬಹಳ ಸುಂದರ
ವಿವಿಧ ಜೀವಿ ಪಕ್ಷಿಯಿಂದ
ಸೊಗಸು ನಮ್ಮ ಪರಿಸರ॥

ಶುದ್ಧ ನೀರಿನಿಂದ ಕೂಡಿ
ಅಲ್ಲಿ ನದಿಯು ಹರಿದಿದೆ
ಅದರ ನೀರಿನಲ್ಲಿ ಈಜಿ
ಮನಸು ಹಗುರ ಆಗಿದೆ॥

**೨. ಕೆಳಗಿನ ಚಿತ್ರದಲ್ಲಿರುವ ಮರಗಳನ್ನು ಹೆಸರಿಸಿ**



೩. **ಕೆಳಗಿನ ಪದಗಳನ್ನು ಒಮ್ಮೆ ಗಟ್ಟಿಯಾಗಿ ಹೇಳಿ ನಿಮ್ಮ ಪುಸ್ತಕದಲ್ಲಿ ಬರೆಯಿರಿ.**

ಮೈದಾನ, ಹೌಹಾರು, ಪ್ರತಿಜ್ಞೆ, ಧ್ವನಿ, ಪಕ್ಷಿ.

೪. **ಕೆಳಗೆ ಕೊಟ್ಟಿರುವ ಪದಗಳಿಗೆ ನಿಘಂಟು ನೋಡಿ ಸಮಾನಾರ್ಥಕ ಪದಗಳನ್ನು ಬರೆಯಿರಿ**

ಸಂತೋಷ, ಅಡವಿ, ಬೆಂಕಿ, ಹೂವು, ಪಕ್ಷಿ.

೫. **ಕೆಳಗೆ ನಾಲ್ಕು ಅಕ್ಷರಗಳನ್ನು ಕೊಡಲಾಗಿದೆ. ಆ ಅಕ್ಷರಗಳಿಂದ ಪ್ರಾರಂಭವಾಗುವ ಪದಗಳನ್ನು ಬರೆಯಿರಿ.**

***ಉದಾಹರಣೆ:*** ಕೀ: ಕೀಟ, ಕೀಟಲೆ, ಕೀಳು

ಕು,ಕಿ,ಕೊ,ಕೆ

೬. **ಕೆಳಗೆ ಕೊಟ್ಟಿರುವ ಪದಗಳಿಗೆ ವಿರುದ್ಧಪದಗಳನ್ನು ಬರೆಯಿರಿ:**

ಸುಂದರ, ದೂರ, ಸಮಾಧಾನ

## – ವ್ಯಾಕರಣಾಭ್ಯಾಸ –

೧. **ಕೆಳಗಿನ ಪದಗಳಲ್ಲಿನ ಅಕ್ಷರಗಳನ್ನು ಬಿಡಿಸಿ ಸ್ವರ ಮತ್ತು ವ್ಯಂಜನಗಳನ್ನು ಗುರುತಿಸಿ:**

***ಉದಾ:*** ಪಕ್ಷಿ: ಪ್+ಅ+ಕ್+ಷ್+ಇ–ವ್ಯಂಜನ+ಸ್ವರ+ವ್ಯಂಜನ+ವ್ಯಂಜನ+ಸ್ವರ

ಕೊಡಲಿ, ಉಸುಕು, ಕೆರೆ, ಅಡವಿ.

೨. **ಕೆಳಗಿನ ಪದಗಳಲ್ಲಿ ವರ್ಗೀಯ ಮತ್ತು ಅವರ್ಗೀಯ ವ್ಯಂಜನಗಳನ್ನು ಗುರುತಿಸಿ:**

ಕಾಶೀಮ, ಕೊಡಲಿ, ಸಮಯ, ಶ್ರಮ




✤ ✤ ✤ ✤ ✤

# ೩. ಕನ್ನಡದ ಕಹಳೆ ಮೊಳಗಲಿ (ಪದ್ಯ)

– ಬಸವರಾಜ ಸಬರದ

**ಆಶಯ:** ಆದಿಕವಿ ಪಂಪನಿಂದ ಹಿಡಿದು ಇಲ್ಲಿಯವರೆಗೂ ಅನೇಕಾನೇಕ ಕವಿಗಳು ನಮ್ಮ ಕನ್ನಡನಾಡುನುಡಿಯ ಬಗ್ಗೆ ಹೆಮ್ಮೆಯಿಂದ ಕಾವ್ಯರಚನೆ ಮಾಡಿದ್ದಾರೆ, ರಚಿಸುತ್ತಲೂ ಇದ್ದಾರೆ. ಕೆಲವು ಕವಿಗಳಿಗೆ ಈ ನಾಡು ನುಡಿ ಸಂಸ್ಕೃತಿಗಳು ಕವನರಚನೆಗೆ ಸ್ಫೂರ್ತಿ ನೀಡಿದ್ದರೆ ಮತ್ತೆ ಕೆಲವು ಕವಿಗಳಿಗೆ ಇವು ಹೊಸ ಆಶಯಗಳನ್ನು, ಕನಸುಗಳನ್ನು ಮೂಡಿಸಿಕೊಳ್ಳಲು ಪ್ರೇರಣೆ ನೀಡಿದೆ. ಈ ಕವನದಲ್ಲಿ ಕನ್ನಡ ನಾಡು ನುಡಿಯ, ಸೊಬಗು, ಭಾಷಾಸೊಗಡು ಇವುಗಳನ್ನು ಕುರಿತ ಕವಿಯ ಸುಂದರ ಕನಸು, ಆಸೆ, ಅಭಿಮಾನ, ಅಪೇಕ್ಷೆಗಳು ಮನೋಜ್ಞವಾಗಿ ಮೂಡಿಬಂದಿವೆ.



ಕನ್ನಡದ ನಾಡೊಳಗ ಕೋಗಿಲೆಯ ಹಾಡಿರಲಿ
ಕಲ್ಲುಮುಳ್ಳಿದ್ದರೂ ಹಾದ್ಯಾಗ । ನನ ಗೆಳೆಯ
ಕನ್ನಡದ ಕೆಚ್ಚು ತುಂಬಿರಲಿ.

ಕೆಳಗಡೆ ಕಾವೇರಿ ಮೇಲೆ ಗೋದಾವರಿ
ನಡುವೆ ಹರಿದಾವ ಎಡೆದೊರಿ । ನಾಡೊಳಗ
ನಗಿಮುಖದ ಕ್ಯಾದಗಿ ಅರಳಲಿ.

ಹೊರನಾಡೆ ಆಗಿರಲಿ ಗಡಿನಾಡೆ ಆಗಿರಲಿ
ಚೆಲುವ ಕನ್ನಡ ನಾಡು ನಗುತಿರಲಿ । ನನ್ನಣ್ಣ
ಬಯಲ ನಾಡಿನ ತುಂಬ ಬೆಳಕಿರಲಿ.

ಮಳೆಗಾಲ ಹೋಗಿರಲಿ ಬರಗಾಲ ಬಂದಿರಲಿ
ಮಲ್ಲಾಡ ಹಸಿರೆಲ್ಲ ಒಣಗಿದರೂ । ನನತಮ್ಮ
ಕನ್ನಡದ ನಾಡೇ ನನಗಿರಲಿ.

ಹೊರಗಿನವರೇ ಬರಲಿ ಒಳಗಿನವರೇ ಇರಲಿ
ಎಲ್ಲರೂ ಕನ್ನಡವ ನುಡಿಯಲಿ। ನಾಡೊಳಗ
ನಗಿನವಿಲು ಗರಿಬಿಚ್ಚಿ ಕುಣಿಯಲಿ.

ನೆಲವೆಲ್ಲ ಬಿರಿಯಲಿ ಮುಗಿಲೆಲ್ಲ ಹರಿಯಲಿ
ಬೆಂಕಿಯ ಮಳೆಯೇ ಸುರಿದರೂ । ನಾಡೊಳಗ
ಕನ್ನಡದ ಕಹಳೆ ಮೊಳಗಲಿ.

## ಕವಿ ಪರಿಚಯ:



ಬಸವರಾಜ ಸಬರದ ಅವರು ಕೊಪ್ಪಳ ಜಿಲ್ಲೆಯ ಕುಕನೂರಿನಲ್ಲಿ ೧೯೫೪ರಲ್ಲಿ ಹುಟ್ಟಿದರು. ಇವರು ಕವಿ, ಚಿಂತಕ, ನಾಟಕಕಾರ ಹಾಗೂ ಸಾಮಾಜಿಕ ಹೋರಾಟಗಾರರಾಗಿ ಪ್ರಸಿದ್ಧರು. ಇವರು ಉಪನ್ಯಾಸಕರಾಗಿ ವೃತ್ತಿ ಆರಂಭಿಸಿ ಗುಲಬರ್ಗಾ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ೨೫ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಇವರು 'ನನ್ನವರ ಹಾಡು' ಮುಂತಾದ ೧೦ ಪ್ರಸಿದ್ಧ ಕವನ ಸಂಕಲನಗಳನ್ನು, ನಾಟಕಗಳು ಹಾಗೂ ಬೀದಿನಾಟಕಗಳನ್ನು ರಚಿಸಿದ್ದಾರೆ. ಇವರಿಗೆ 'ಕಾವ್ಯಾನಂದ' ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ಮತ್ತು ಜಿ. ಎಸ್. ಎಸ್. ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿಗಳು ದೊರಕಿವೆ.

***ಈ ಕವನವನ್ನು ಬಸವರಾಜ ಸಬರದ ಅವರ 'ಸಮಗ್ರ ಕಾವ್ಯ'ದಿಂದ ಆರಿಸಿಕೊಳ್ಳಲಾಗಿದೆ.***



## ಪದಗಳ ಅರ್ಥ:

ನುಡಿಯಲಿ – ಮಾತನಾಡಲಿ; ಹಾದ್ಯಾಗ – ಹಾದಿಯಲ್ಲಿ, ದಾರಿಯಲ್ಲಿ; ಕೆಚ್ಚು – ಧೈರ್ಯ, ಸಾಹಸ; ಕ್ಯಾದಗಿ – ಕೇದಗೆ; ನಗಿಮುಖದ – ನಗೆಮುಖದ; ಬರಗಾಲ – ಕ್ಷಾಮ; ಕಹಳೆ – ಒಂದು ವಾದ್ಯ.

## – ಅಭ್ಯಾಸ ಚಟುವಟಿಕೆ –

### ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:

೧. ಕನ್ನಡ ನಾಡಿನಲ್ಲಿ ಯಾವ ಹಾಡಿರಬೇಕು?

೨. ಕವಿ ಹೇಳುವ ಕನ್ನಡದ ನದಿಗಳು ಯಾವುವು?

೩. ಕೇದಗೆ ಯಾವ ರೀತಿ ಅರಳಬೇಕೆಂದು ಕವಿ ಬಯಸಿದ್ದಾರೆ.

೪. ಬಯಲ ನಾಡು ಹೇಗಿರಬೇಕು?

೫. ಎಲ್ಲ ಕಾಲದಲ್ಲೂ ಕವಿ ಏನನ್ನು ಬಯಸುತ್ತಾನೆ?

೬. ನವಿಲು ಏನು ಮಾಡಬೇಕೆಂದು ಕವಿಯ ಆಶಯ?

೭. ಕನ್ನಡದ ಕಹಳೆ ಯಾವ ಯಾವ ಸನ್ನಿವೇಶಗಳಲ್ಲಿ ಮೊಳಗಬೇಕು?

### ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.

೧. ಕನ್ನಡ ನಾಡೇ ನನಗಿರಲಿ ಎಂಬ ಕವಿಯ ಅಪೇಕ್ಷೆ ಕವನದಲ್ಲಿ ಹೇಗೆ ಮೂಡಿಬಂದಿದೆ?

ಇ. **ಕೆಳಗಿನ ಪದಗಳಿಗೆ ಪದ್ಯದಲ್ಲಿ ಬಳಸಿರುವ ಪ್ರಾಸಪದಗಳನ್ನು ತಿಳಿಸಿ.**

ಹಾಡಿರಲಿ, ಆಗಿರಲಿ, ಬಂದಿರಲಿ.

ಈ. **ಕೆಳಗಿನ ಪದಗಳ ಗ್ರಾಂಥಿಕ ರೂಪಗಳನ್ನು ತಿಳಿಸಿ.**

ನಾಡೊಳಗ, ಹಾದ್ಯಾಗ, ಹರಿದಾವ, ಕ್ಯಾದಗಿ, ಮಲ್ಲಾಡ, ನನತಮ್ಮ

ಉ. **ಕೆಳಗೆ ಕೊಟ್ಟಿರುವ ಅರ್ಥಕೊಡುವ ಪದ್ಯದ ಸಾಲುಗಳನ್ನು ಗುರುತಿಸಿ.**

*ಉದಾ:* ನಗುವ ಕೇದಗೆ ಅರಳಲಿ – ನಗುಮುಖದ ಕ್ಯಾದಗಿ ಅರಳಲಿ

ಕನ್ನಡದ ಧೈರ್ಯ ತುಂಬಿರಲಿ –

ಹೊರಗಿನವರು, ಒಳಗಿನವರು ಕನ್ನಡ ನುಡಿಯನ್ನೇ ಮಾತನಾಡಲಿ –

ಊ.**ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

ನಾಡೊಳಗ, ಮಳೆಗಾಲ, ಹಸಿರಲ್ಲ, ನನ್ನಣ್ಣ

ಋ. **ಕೆಳಗಿನ ಪದಗಳನ್ನು ಕೂಡಿಸಿ ಬರೆಯಿರಿ.**

ನೆಲ+ಎಲ್ಲ, ಮುಗಿಲು+ಎಲ್ಲ, ಆಗಿ+ಇರಲಿ, ಹೋಗಿ+ಇರಲಿ

## – ಪ್ರಾಯೋಗಿಕ ಚಟುವಟಿಕೆ –

ಅ. **ಈ ಪದ್ಯವನ್ನು ಕಂಠಪಾಠ ಮಾಡಿರಿ.**

ಆ. **ಕರ್ನಾಟಕದಲ್ಲಿರುವುದು ನಿಮಗೆ ಹೆಮ್ಮೆಯ ವಿಷಯವೇ? ಏಕೆ ಎಂದು ಬರೆಯಿರಿ.**

ಇ. **ನಿಮ್ಮ ಆಶೆಯಂತೆ ಕರ್ನಾಟಕ ಹೇಗಿರಬೇಕು ಎಂಬುದನ್ನು ನಿಮ್ಮ ತರಗತಿಯಲ್ಲಿ ಹಂಚಿಕೊಳ್ಳಿರಿ.**

ಈ. **ಕಣವಿಯವರ ಈ ಕವನವನ್ನುತರಗತಿಯಲ್ಲಿ ಸಾಮೂಹಿಕವಾಗಿ ಹಾಡಿ**

"ಹೆಸರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ
ಹಸಿಗೋಡೆಯ ಅರಳಿನಂತೆ
ಹುಸಿಹೋಗದ ಕನ್ನಡ."

**ಕನ್ನಡವೇ ಸತ್ಯ ಕನ್ನಡವೇ ನಿತ್ಯ**

ಉ. ಕನ್ನಡದಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ೮ ಕವಿ, ಲೇಖಕರ ಚಿತ್ರಗಳನ್ನು ಕೆಳಗೆ ಕೊಡಲಾಗಿದೆ. ಅವರುಗಳನ್ನು ಗುರುತಿಸಿ.







.................................... .......................................... ..........................................







.................................... .......................................... ..........................................






.................................... ..........................................

# ೪. ಭಲೇ ಬಿಂದು (ಗದ್ಯ)

– ಬಿ ಬೋರೇಗೌಡ

**ಆಶಯ:** ತಾಯಿ ಮತ್ತು ತಾಯಿನಾಡು ಇವು ಸ್ವರ್ಗಕ್ಕಿಂತಲೂ ಮಿಗಿಲು ಎಂಬ ಮಾತಿದೆ. ಆದುದರಿಂದಲೇ ಅವೆರಡನ್ನು ಉಳಿಸಿಕೊಳ್ಳಲು ಎಂತಹ ಕಷ್ಟಬಂದರೂ ಲೆಕ್ಕಿಸದೆ ಹೋರಾಡುವುದು ನಮಗೆ ತಿಳಿದಿದೆ. ತಾಯಿ ಮತ್ತು ತಾಯಿನಾಡಿಗಾಗಿನ ಈ ಹೋರಾಟ ವಯಸ್ಕರಿಗೆ ಮಾತ್ರ ಸೀಮಿತವಲ್ಲ, ಮಕ್ಕಳೂ ಈ ದಿಸೆಯಲ್ಲಿ ವಿಶೇಷ ಸಾಹಸ ಪ್ರದರ್ಶಿಸಿರುವ ಅನೇಕ ಉದಾಹರಣೆಗಳು ಇವೆ. ಭಾರತ ಸರ್ಕಾರ ಅಂತಹ ಮಕ್ಕಳನ್ನು ಪುರಸ್ಕರಿಸಿ ಗೌರವಿಸುತ್ತದೆ. ಈ ರೀತಿ ಅನೇಕ ಭಿನ್ನ ಸಂದರ್ಭಗಳಲ್ಲಿ ಸಾಹಸ ಮೆರೆದ ಅನೇಕ ಮಕ್ಕಳನ್ನು ನಾವಿಂದು ಕಾಣುತ್ತೇವೆ. ಅಂತಹವರ ಸಾಲಿನಲ್ಲಿ ತನ್ನ ವಿಶೇಷ ಧೈರ್ಯ ಮತ್ತು ಮಾತೃಪ್ರೀತಿಯನ್ನು ಮೆರೆದ ಬಿಂದು ಎಂಬ ಬಾಲಕಿಯ ಸಾಹಸದ ವರ್ಣನೆಯೇ ಈ ಗದ್ಯಭಾಗ.

ಕೇರಳ ಪಶ್ಚಿಮ ಕರಾವಳಿಯಲ್ಲಿರುವ ನಮ್ಮ ನೆರೆಯ ರಾಜ್ಯ. ಈ ರಾಜ್ಯದ ತ್ರಿಚೂರು ಜಿಲ್ಲೆಯ ಹಳ್ಳಿಯ ಬಾಲಕಿ ಬಿಂದು. ಈಕೆ ನಡಕಲ್‌ಚೆರಿಯಲ್ಲಿರುವ ಪ್ರೌಢಶಾಲೆಯ ವಿದ್ಯಾರ್ಥಿನಿಯಾಗಿದ್ದಳು. ಇವಳ ತಂದೆಯ ಹೆಸರು ಅಯ್ಯಪ್ಪನ್. ತಾಯಿ ದಾಕ್ಷಾಯಿಣಿ. ಇವರ ಮನೆಯವರು ಒಂದು ಹಸುವನ್ನು ಸಾಕಿದ್ದರು.

ಒಂದು ದಿನ ಮಧ್ಯಾಹ್ನ ಬಿಂದುವಿನ ತಾಯಿ ತನ್ನ ಅಕ್ಕರೆಯ ಹಸುವನ್ನು ಹಿಡಿದು ಮನೆಯ ಹಿಂದಿನ ಮೈದಾನದಲ್ಲಿ ಮೇಯಿಸಲು ನಿಂತರು. ಬೆಳೆದ ಹುಲ್ಲನ್ನು ಮೇಯುತ್ತಾ ಹಸು ಮುಂದೆ ಮುಂದೆ ಹೋದರೆ ಅದರ ಹಗ್ಗ ಹಿಡಿದ ಅವರು ಹಿಂದೆ ಹಿಂದೆ ಹೋಗುತ್ತಿದ್ದರು. ಸ್ವಲ್ಪ ಹೊತ್ತು ಮೇಯ್ದ ನಂತರ ಹಸುವಿಗೆ ತೊಣಚಿ ಹಿಂಸೆ ಕೊಡಲು ಪ್ರಾರಂಭಿಸಿತು. ಹಿಂಸೆ ತಪ್ಪಿಸಿಕೊಳ್ಳಲು ಹಸು, ಬಾಯಿ ಹಾಗೂ ಕಾಲುಗಳಿಂದ ಬಡಿದು, ಬಾಲ ಬೀಸಿ, ತೊಣಚಿಯನ್ನು ಓಡಿಸಲು ಪ್ರಾರಂಭಿಸಿತು. ಓಡಿದರೆ ಅದರಿಂದ ತಪ್ಪಿಸಿಕೊಳ್ಳಬಹುದೆಂದು ಹಸು ಓಟ ಕಿತ್ತಿತು. ಇದ್ದಕ್ಕಿದ್ದಂತೆ ಓಟ ಕಿತ್ತ ಹಸುವನ್ನು ತಡೆಯಲು ಬಿಂದುವಿನ ತಾಯಿ ತಾವು ಹಿಡಿದ ಹಗ್ಗವನ್ನು ಜಗ್ಗಿಸಿ ಎಳೆದರು. ಓಡುವಾಗ ಹಸು ತನ್ನ ಮುಂದೆ ಸಿಕ್ಕಿದ ಬಾವಿಯನ್ನು ದಾಟಿ ನೆಗೆದು ಮುಂದೆ ಓಡಿತು. ಹಸುವೇನೋ ನೆಗೆದು ಓಡಿತು. ಆದರೆ ಆ ತಾಯಿ ಅದರ ಹಿಂದೆ ಓಡುತ್ತಿದ್ದು ಬಾವಿಯನ್ನು ದಾಟಲಾರದೆ ಓಡಿಬಂದ ರಭಸದಲ್ಲಿ ಬಾವಿಯಲ್ಲಿ ಬಿದ್ದರು. ಹಗ್ಗ ಅವರ ಕೈಯಿಂದ ಕಳಚಿಕೊಂಡಿತು. ಹಗ್ಗ ಬಿಡಿಸಿಕೊಂಡು ಹಸು ಎತ್ತಲೋ ಓಡಿತು.

ಅದೇ ವೇಳೆಗೆ ಶಾಲೆಯಿಂದ ಮನೆಗೆ ಬಂದ ಬಿಂದು ಮನೆಯಲ್ಲಿ ತಾಯಿಯನ್ನು ಕಾಣದೆ ಅವರನ್ನು ಕರೆಯುತ್ತಲೇ ಹೊರಬಂದಳು. ಅವಳ ತಾಯಿ ಆಗತಾನೇ ನೀರಿನೊಳಕ್ಕೆ ಬಿದ್ದಿದ್ದರು. ನೀರಿನಲ್ಲಿ ಒಮ್ಮೆ ಮುಳುಗಿ ಏಳುವಾಗ ಆಗುವ ಶಬ್ದವನ್ನು ಬಿಂದು ಗಮನಿಸಿದಳು. ನೀರಿನ ಸದ್ದು ಬಾವಿಯೊಳಗಿನಿಂದ ಕೇಳಿಬಂದುದನ್ನು ಅವಳು ಗುರುತಿಸಿದಳು. ಬಾವಿಯಲ್ಲಿ ಬಗ್ಗಿ ನೋಡಿದಳು. ಅತ್ಯಂತ ಗಾಬರಿಗೊಂಡಳು. 'ಅಯ್ಯೋ ಅಮ್ಮ ಬಾವಿಯಲ್ಲಿ ಬಿದ್ದಿದ್ದಾಳೆ ಬನ್ನಿ, ಕಾಪಾಡಿ' ಎಂದು ಬೊಬ್ಬೆ ಹಾಕಿದಳು. ಕೂಡಲೇ ಬಾವಿಗೆ ಧುಮುಕಿಯೇ ಬಿಟ್ಟಳು.

ಬಿಂದು ಬಾವಿಯ ನೀರಿನಲ್ಲಿ ಮುಳುಗಿ ಮೇಲೆದ್ದು ಒಂದು ಕೈಯಿಂದ ಬಾವಿಯ ದಡವನ್ನು ಹಿಡಿದಳು. ಅಷ್ಟರಲ್ಲಿ ಮತ್ತೊಮ್ಮೆ ಮೇಲೆದ್ದ ತಾಯಿಯ ಸೀರೆಯ ಸೆರಗನ್ನು ಕೈಯಿಂದ ಹಿಡಿದಳು. ದಡವನ್ನು ಹಿಡಿದ ಕೈ ಜಾರುತ್ತಿತ್ತು. ತಕ್ಷಣವೇ ಸೀರೆಯ ಸೆರಗನ್ನು ಬಾಯಲ್ಲಿ ಕಚ್ಚಿ ಮತ್ತೊಂದು ಕೈಯಿಂದ ದಡ ಹಿಡಿದಳು.

ತೇವವಿದ್ದುದರಿಂದ ಗುಳಿ ಮಾಡಿ ದಡವು ಹಿಡಿತಕ್ಕೆ ಸಿಗುವಂತೆ ಬಲಗೈಯಿಂದ ಹಿಡಿದಳು. ಬಾಯಿ ಹಾಗೂ ಎಡಗೈ ಉಪಯೋಗಿಸಿ ಸೀರೆಯ ಸೆರಗನ್ನು ಎಳೆದೆಳೆದು ತಾಯಿಯ ಶರೀರ ಮೇಲೆ ಬರುವಂತೆ ಮಾಡಿದಳು. ಕೊನೆಗೆ ಮೇಲೆದ್ದ ತಾಯಿಯ ತಲೆಗೂದಲನ್ನು ಹಿಡಿದುಬಿಟ್ಟಳು. ಮೇಲೆ ಏರಲು ಯಾರಾದರೊಬ್ಬರ ಸಹಾಯ ಬೇಕೇಬೇಕೆಂದು ಸಹಾಯಕ್ಕಾಗಿ ಮತ್ತೆ ಮತ್ತೆ 'ಕಾಪಾಡಿ ಕಾಪಾಡಿ' ಎಂದು ಬೊಬ್ಬೆ ಹಾಕಿದಳು.



ಅಷ್ಟರಲ್ಲಿ ಈಗಾಗಲೇ ಬಿಂದು ಬೊಬ್ಬೆ ಹಾಕಿದುದನ್ನು ಕೇಳಿದ ನೆರೆಮನೆಯವರು ಬಾವಿಯ ಬಳಿ ಓಡೋಡಿ ಬಂದರು. ಬಿಂದುವಿಗೆ ಧೈರ್ಯ ಹೇಳಿ ಏಣಿಯನ್ನೂ ಹಗ್ಗವನ್ನೂ ಕುರ್ಚಿಯನ್ನೂ ತಂದರು. ಆತುರಾತುರವಾಗಿ ಏಣಿಗೆ ಹಗ್ಗ ಕಟ್ಟಿ ಬಾವಿಗಿಳಿಸಿದರು. ಏಣಿಯನ್ನು ನಿಲ್ಲಲು ಆಧಾರಮಾಡಿಕೊಳ್ಳುವಂತೆ ಬಿಂದುವಿಗೆ ಗಟ್ಟಿಸ್ವರದಲ್ಲಿ ಹೇಳಿದರು. ಬಾವಿಯ ಮೇಲ್ಗಡೆ ಅಡ್ಡಲಾಗಿ ಮರವೊಂದನ್ನಿಟ್ಟು ಅದರ ಮೇಲೆ ಹಗ್ಗ ಹಾಕಿ, ಹಗ್ಗದ ತುದಿಗೆ ಕುರ್ಚಿ ಕಟ್ಟಿ ಬಾವಿಗೆ ಇಳಿಸಿದರು. ತಾವೂ ಬಾವಿಗಿಳಿದು ಕುರ್ಚಿ ಮತ್ತು ಹಗ್ಗದ ಸಹಾಯದಿಂದ ಬಿಂದು ಮತ್ತು ಅವಳ ತಾಯಿಯನ್ನು ಮೇಲೆಳೆದುಕೊಂಡರು.

ಸುಕುಮಾರಿಯಾದ ಬಿಂದು ತಾಯಿಯನ್ನು ರಕ್ಷಿಸುವ ಕಾರ್ಯದಲ್ಲಿ ಬಹಳ ಆಯಾಸಗೊಂಡಿದ್ದಳು. ಆದರೂ ತನ್ನ ತಾಯಿ ಬದುಕಿದಳಲ್ಲ ಎಂಬ ಸಂತೋಷದಲ್ಲಿ ಆಯಾಸವನ್ನು ಮರೆತು ತಾಯಿಯನ್ನು ಉಪಚರಿಸಿದಳು.

ಕೇರಳದ ಪತ್ರಿಕೆಗಳು ಬಿಂದುವಿನ ಸಾಹಸವನ್ನು ಪ್ರಕಟಿಸಿದವು. ಅನೇಕ ಸಂಸ್ಥೆಗಳವರು ಬಿಂದುವಿಗೆ ನಗದು ಬಹುಮಾನವಿತ್ತು ಸನ್ಮಾನಿಸಿದರು. ಭಾರತದ ಮಕ್ಕಳ ಕಲ್ಯಾಣ ಮಂಡಳಿಯವರು ಅವಳನ್ನು ಆ ವರ್ಷದ ಸಾಹಸಿ ಪ್ರಶಸ್ತಿಗೆ ಆಯ್ಕೆ ಮಾಡಿದರು.

## ಲೇಖಕರ ಪರಿಚಯ :



ಬಿ ಬೋರೇಗೌಡ ಅವರು ಕೃಷ್ಣರಾಜನಗರದ ಬೆಣಗನಹಳ್ಳಿಗ್ರಾಮದಲ್ಲಿ ೧೯೨೫ರಲ್ಲಿ ಹುಟ್ಟಿದರು. ಇವರು 'ಸಾಹಸಿಯಾತ್ರಿಕರು', 'ಇಚ್ಛಾಸಂತಾನ', 'ಫಜೀತಿ ಪಾಪಣ್ಣ', (ಸಾಹಸಿ ಮಕ್ಕಳು) ಮುಂತಾಗಿ ಕನ್ನಡದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಮೂರು ದಶಕಗಳಿಗೂ ಹೆಚ್ಚು ಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.

***ಈ ಪಾಠವನ್ನು ಇವರ 'ಸಾಹಸಿ ಮಕ್ಕಳು' ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ.***

## ಪದಗಳ ಅರ್ಥ:

ನೆರೆ – ಪಕ್ಕ; ತೊಣಚಿ – ಪ್ರಾಣಿಗಳ ಮೈಮೇಲೆ ಕುಳಿತು ತೊಂದರೆ ಕೊಡುವ ಒಂದು ಜಾತಿಯ ಹುಳ; ಓಟಕೀಳು – ಜೋರಾಗಿ ಓಡು; ಬೊಬ್ಬೆ ಹಾಕು – ಜೋರಾಗಿ ಕೂಗು; ಸನ್ಮಾನಿಸು – ಗೌರವಿಸು.



## – ಅಭ್ಯಾಸ ಚಟುವಟಿಕೆ –

### ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:

೧. ಬಿಂದುವಿನ ತಂದೆ ತಾಯಿಯರ ಹೆಸರೇನು?

೨. ಬಿಂದುವಿನ ತಾಯಿ ಮನೆಯ ಹಿಂದಿನ ಮೈದಾನಕ್ಕೆ ಹೋದುದು ಏಕೆ?

೩. ಶಾಲೆಯಿಂದ ಮನೆಗೆ ಬಂದ ಬಿಂದು ತಾಯಿಯನ್ನು ಕಾಣದೆ ಏನು ಮಾಡಿದಳು?

೪. ತಾಯಿ ಬಾವಿಗೆ ಬಿದ್ದಿರುವುದು ತಿಳಿದ ಕೂಡಲೆ ಬಿಂದು ಏನು ಮಾಡಿದಳು?

೫. ಬಿಂದು ಬೊಬ್ಬೆ ಹಾಕಿದುದು ಏಕೆ?

೬. ಬಿಂದು ಬೊಬ್ಬೆ ಹಾಕಿದುದನ್ನು ಕೇಳಿ ನೆರೆಮನೆಯವರು ಏನು ಮಾಡಿದರು?

### ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ

೧. ಬಿಂದುವಿನ ತಾಯಿ ಏಕೆ ಅಸ್ವಸ್ಥರಾಗಿದ್ದರು?

೨. ತಾಯಿಯನ್ನು ಉಳಿಸಿದ ಬಿಂದುವಿನ ಸಾಹಸಕ್ಕೆ ಸಿಕ್ಕ ಪ್ರತಿಫಲವೇನು?

೩. ಬಿಂದುವಿನ ತಾಯಿ ಹಸುವನ್ನು ಮೇಯಿಸುತ್ತಿರುವಾಗ ಏನಾಯಿತು?

೪. ತಾಯಿ ಬಾವಿಯಲ್ಲಿ ಬಿದ್ದಿರುವರೆಂದು ಬಿಂದುವಿಗೆ ಹೇಗೆ ತಿಳಿಯಿತು?

**ಇ. ಈ ಪಾಠಕ್ಕೆ ಸಂಬಂಧಿಸಿದಂತೆ ಕೆಳಗೆ ಕೊಟ್ಟಿರುವ ಸನ್ನಿವೇಶಗಳ ಹಿಂದೆ ಏನೋ ಘಟನೆ ನಡೆದಿದೆ. ಅದನ್ನು ನಿಮ್ಮ ತರಗತಿಯಲ್ಲಿ ಗಟ್ಟಿಯಾಗಿ ವಿವರಿಸಿರಿ.**

'ತೊಣಚಿ ಹಿಂಸೆ ಕೊಡಲು ಪ್ರಾರಂಭಿಸಿತು'

'ಅಯ್ಯೋ ಅಮ್ಮ ಬಾವಿಯಲ್ಲಿ ಬಿದ್ದಿದ್ದಾಳೆ, ಬನ್ನಿ ಕಾಪಾಡಿ ಎಂದು ಬೊಬ್ಬೆ ಹಾಕಿದಳು'

'ಕೊನೆಗೆ ಮೇಲೆದ್ದ ತಾಯಿಯ ತಲೆಗೂದಲನ್ನು ಹಿಡಿದುಬಿಟ್ಟಳು'

'ಹಗ್ಗದ ತುದಿಗೆ ಕುರ್ಚಿ ಕಟ್ಟಿ ಬಾವಿಗಿಳಿಸಿದರು'

**ಈ. ಈ ಪದಗಳ ಅರ್ಥವನ್ನು ಗಮನಿಸಿ. ಅರ್ಥಕ್ಕೆ ಅನುಗುಣವಾದ ವಾಕ್ಯಗಳನ್ನು ಗಮನಿಸಿ. ನೀವೂ ಇದೇ ಪದಗಳನ್ನು ಬಳಸಿ ಅರ್ಥಪೂರ್ಣವಾದ ವಾಕ್ಯಗಳನ್ನು ರಚಿಸಿರಿ.**

ನೆರೆ: ನಮ್ಮ ನೆರೆಯವರೊಂದಿಗೆ ನಾವು ಕೂಡಿ ಬಾಳಬೇಕು.

ತೊಣಚಿ: ತೊಣಚಿ ಮೈಮೇಲೆ ಕೂತರೆ ಹಸುಗಳಿಗೆ ಕಸಿವಿಸಿಯಾಗುತ್ತದೆ.

ದಕ್ಕು: ಬಿದ್ದು ಹೋಗುತ್ತಿರುವ ತಲೆಯ ಮೇಲಿನ ಕಂತೆ ಬೀಳಬಾರದೆಂದು ರವಿ ಎಷ್ಟು ಕಷ್ಟಪಟ್ಟರೂ ಅದು ದಕ್ಕಲಿಲ್ಲ.

ರಭಸ: ಧುಮುಕುವ ಜಲಪಾತದ ರಭಸಕ್ಕೆ ಮಕ್ಕಳು ಆಶ್ಚರ್ಯಪಟ್ಟರು.

ಸದ್ದು: ಬೆಕ್ಕು ಸದ್ದು ಮಾಡದೆ ಹಾಲು ಕುಡಿದು ಹೋಗಿಬಿಡುತ್ತದೆ.

ಬೊಬ್ಬೆ ಹಾಕು: ನೆರೆ ಬಂದ ಪರಿಣಾಮ ಮನೆ ಬಿಟ್ಟುಬಂದ ಜನರು ಎರಡು ದಿನಗಳಿಂದ ತಿನ್ನಲು ಏನೂ ಇಲ್ಲದೆ ಬೊಬ್ಬೆ ಹಾಕಿದರು.

ಧುಮುಕು: ಜೋಗ ಎಂಬ ಸ್ಥಳದಲ್ಲಿ ಜಲಪಾತದ ನೀರು ಅತಿ ಎತ್ತರದಿಂದ ಧುಮುಕುತ್ತದೆ.

ನೆರೆಮನೆ: ನನಗೆ ನೆರೆಮನೆಯಲ್ಲಿ ಆಡುವ ಅನೇಕ ಗೆಳೆಯ ಗೆಳತಿಯರಿದ್ದಾರೆ.

ಅಸ್ವಸ್ಥ: ಅಸ್ವಸ್ಥರಾದವರನ್ನು ನಗುಮುಖದಿಂದ ಮಾತನಾಡಿಸಬೇಕು.

ಸನ್ಮಾನಿಸು: ಜನಸೇವೆ ಮಾಡಿದ ಮದರ್ ತೆರೆಸಾ ಅವರನ್ನು ಅನೇಕ ಸಂಸ್ಥೆಗಳು ಸನ್ಮಾನಿಸಿದವು.

## – ಪ್ರಾಯೋಗಿಕ ಚಟುವಟಿಕೆ –

**ಅ. ಗಮನಿಸಿ:**

ಈ ಪಾಠದಲ್ಲಿ ಬರುವ 'ಓಟ ಕೀಳು' ಎಂಬ ಮಾತನ್ನು ಗಮನಿಸಿ. ನಾವು ಅನೇಕ ಬಾರಿ ಇಂತಹ ಮಾತುಗಳನ್ನು ಬಳಸುತ್ತೇವೆ. ಇವುಗಳು ಮೇಲುನೋಟಕ್ಕೆ ಕೊಡುವ ಅರ್ಥವನ್ನಲ್ಲದೆ ಅದಕ್ಕಿಂತ ಬೇರೆಯದೇ ಅರ್ಥವನ್ನು ಕೊಡುತ್ತವೆ. 'ಓಟ'ಎಂದರೆ ಓಡುವುದು ಎಂಬುದೇನೋ ನಿಜ. ಅದನ್ನು ಕೀಳುವುದು ಹೇಗೆ ಎಂದು ಭಾಷೆಯನ್ನು ಕಲಿಯುವ ಹಂತದಲ್ಲಿರುವವರಿಗೆ ಅನ್ನಿಸುವುದು ಸಹಜ. ಅತಿ ಜೋರಾಗಿ ಓಡಿದ ಎಂಬುದನ್ನು ತಿಳಿಸಲು ಈ ಮಾತನ್ನು ಬಳಸುತ್ತೇವೆ. ಇಂತಹ ಮಾತುಗಳು ಹೇಳಬೇಕಾದುದನ್ನು

ಮನಮುಟ್ಟುವಂತೆ ಹೇಳುತ್ತವೆ. ನೀವು ಕನ್ನಡ ಭಾಷೆಯನ್ನು ಬಹಳ ಚೆನ್ನಾಗಿ ಕಲಿಯಬೇಕಾದರೆ ಇಂತಹ ಮಾತುಗಳನ್ನು ಗಮನಿಸುತ್ತಿರಬೇಕು. ನಿಮಗೆ ಈಗಾಗಲೇ ಇಂತಹ ಮಾತುಗಳು ಕಿವಿಗೆ ಬಿದ್ದಿರುತ್ತವೆ. ನೆನಪಿಸಿಕೊಳ್ಳಲು ಪ್ರಯತ್ನಿಸಿ. ಇವುಗಳನ್ನು 'ಪಡೆನುಡಿ' ಅಥವಾ 'ನುಡಿಗಟ್ಟು' ಎಂದು ಕರೆಯುತ್ತಾರೆ. ಕೆಳಗಿನ ಪಡೆನುಡಿಗಳನ್ನು ಗಮನಿಸಿ.

- ಅವನು ಇವತ್ತು <u>ನನ್ನ 'ತಲೆ ತಿಂದುಬಿಟ್ಟ'.</u>
- ಈ ಕಷ್ಟದಿಂದ ನನಗೆ <u>'ತಲೆಬಿಸಿಯಾಗಿದೆ'.</u>

ಮೊದಲೇ ಕಷ್ಟ, ಮತ್ತೂ ಕಷ್ಟ ಬಂದಿದೆ ಎಂದು ಹೇಳಬೇಕು ಎಂದಿಟ್ಟುಕೊಳ್ಳೋಣ. ಆಗ ಏನು ಹೇಳುತ್ತಾರೆ ಗೊತ್ತೇ? – 'ಬಾಣಲೆಯಿಂದ ಬೆಂಕಿಗೆ ಹಾಕಿದಂತೆ' – ಇಂತಹ ಮಾತುಗಳನ್ನು ಬಳಸಲು, ಅಭ್ಯಾಸಮಾಡಲು ಖುಷಿಯಾಗುತ್ತದೆ. ಪ್ರಯತ್ನಿಸಿ. ಇಂತಹ ಮಾತುಗಳನ್ನು ದಿನಕ್ಕೆ ಒಂದರಂತೆ ನಿಮ್ಮ ಅಪ್ಪ, ಅಮ್ಮ ಅಧ್ಯಾಪಕರಿಂದ ಕೇಳಿ ತಿಳಿಯಿರಿ.

ಆ. ಮಧ್ಯಾಹ್ನ ಎಂಬುದು ದಿನದ ಒಂದು ಕಾಲವನ್ನು ಸೂಚಿಸುವ ಪದ. ದಿನದ ಇತರ ಕಾಲಗಳನ್ನು ಸೂಚಿಸುವ ಪದಗಳನ್ನು ಬರೆಯಿರಿ.

ಇ. ಸ್ಕೂಲು ಎಂಬ ಇಂಗ್ಲಿಷ್ ಪದವನ್ನು ನಾವು ಕನ್ನಡದಲ್ಲೂ ಹಾಗೆಯೇ ಬಳಸುತ್ತೇವೆ. ನಾವು ಕನ್ನಡ ಮಾತನಾಡುವಾಗ ಇಂತಹ ಅನೇಕ ಪದಗಳನ್ನು ಬಳಸುತ್ತೇವೆ. ಉದಾಹರಣೆಗೆ, ಪೆನ್ನು, ಬುಕ್ಕು ಇತ್ಯಾದಿ. ನಿಮ್ಮ ಗಮನಕ್ಕೆ ಬಂದಿರುವಂತೆ ಕನ್ನಡದಲ್ಲಿ ಬಳಸುವ ಇಂಗ್ಲಿಷ್‌ನ ಪದಗಳನ್ನು ಗುರುತಿಸಿ.

ಈ. ಅವರು ಏಣಿಯನ್ನೂ ಹಗ್ಗವನ್ನೂ ಕುರ್ಚಿಯನ್ನೂ ತಂದರು' ಎಂಬ ಮಾತನ್ನು ಅವರು ಏಣಿ ಹಗ್ಗ ಕುರ್ಚಿಗಳನ್ನು ತಂದರು ಎಂದು ಹೇಳಬಹುದಲ್ಲವೇ? ಈ ರೀತಿ ಮಾತನಾಡುವುದು ಹೆಚ್ಚು ಸುಲಭ. ಕೆಳಗಿನ ವಾಕ್ಯಗಳನ್ನು ಈ ರೀತಿಯಲ್ಲಿ ಚಿಕ್ಕದಾಗಿ ಹೇಳಿ.

ರಾಣಿ ಬಿಸ್ಕತ್ತನ್ನೂ ಚಾಕ್ಲೆಟ್ಟನ್ನೂ ಹಣ್ಣುಗಳನ್ನೂ ತಿಂದಳು.

ಗುಂಡ ರವೆಉಂಡೆಗಳನ್ನೂ ಚಕ್ಕುಲಿಗಳನ್ನೂ ಒಬ್ಬಟ್ಟನ್ನೂ ತಿಂದನು.



## – ವ್ಯಾಕರಣಾಭ್ಯಾಸ –

ಕೆಳಗಿನ ಪದಗಳಲ್ಲಿ ಸಜಾತೀಯ ಮತ್ತು ವಿಜಾತೀಯ ಸಂಯುಕ್ತಾಕ್ಷರಗಳನ್ನು ವಿಂಗಡಿಸಿ ಗುರುತಿಸಿರಿ:

***ಉದಾಹರಣೆ:*** ಲೆಕ್ಕಿಸು–ಸಜಾತೀಯ: 'ಕ್ಕಿ'

ಮಕ್ಕಳು, ಪ್ರೀತಿ, ಗದ್ಯ,ಅಕ್ಕರೆ, ಅಯ್ಯಪ್ಪನ್, ದಾಕ್ಷಾಯಿಣಿ, ಹುಲ್ಲು,ತಪ್ಪಿಸಿಕೊ, ಹಗ್ಗ, ಬಾವಿಯಲ್ಲಿ, ಸ್ವರ.



# ೫. ವೀರಪುತ್ರರು (ಪದ್ಯ)

– ಡಿ. ವಿ. ಬಡಿಗೇರ

**ಆಶಯ:** ನಾಡಿನ ರಕ್ಷಣೆಗಾಗಿ ಟೊಂಕ ಕಟ್ಟಿ ನಿಂತ ಸೈನಿಕರು ದೇಶಕ್ಕೆ ಕೊಡುವ ಕೊಡುಗೆಯನ್ನು ವರ್ಣಿಸಲು ಅಸಾಧ್ಯ. ಬಿಸಿಲು–ಚಳಿ, ಕಷ್ಟ–ಸುಖ ಇವುಗಳನ್ನೆಲ್ಲ ಲೆಕ್ಕಿಸದೆ ಹೋರಾಡುವವರು ಇವರು. ಮನೆ–ಮಠಗಳ ಸಂಬಂಧಗಳನ್ನು ಮೀರಿ ನಾಡಿಗಾಗಿ ದುಡಿಯುವವರು. ಸಾವಿಗೂ ಅಂಜದೆ ತಾಯಿನಾಡಿಗಾಗಿ ಸೆಣೆಸಾಡುವವರು. ಇಂತಹವರ ಧೈರ್ಯ, ಶೌರ್ಯ, ತ್ಯಾಗ, ಬಲಿದಾನಗಳನ್ನು ಎಷ್ಟು ಕೊಂಡಾಡಿದರೂ ಸಾಲದು.



ನೋಡು ತಾಯಿ ಭಾರತಿ
ಇವರು ನಿನ್ನ ಸಂತತಿ.

ಚಳಿಯ ಮೆಟ್ಟಿ ನಿಂತರು
ಅರಿಯ ಕುಟ್ಟಿ ಕೊಂದರು
ನಿನ್ನ ಪುತ್ರರತ್ನರು.

ಗಡಿಯ ರಕ್ಷೆಗೈಯ್ಯಲು
ಸಿಡಿವ ಗುಂಡಿಗಂಜದೆ
ಎದೆಯ ಒಡ್ಡಿ ನಿಂತರು.

ಹಸಿವು ನಿದ್ರೆ ಸುಳಿದರೂ
ನೆಲವು ಹತ್ತಿ ಉರಿದರೂ
ಸೇವೆಗಿವರು ಬದ್ಧರು.

ಬಂಧು ಬಳಗ ಮರೆತರು
ಮನೆಯ ಚಿಂತೆ ತೊರೆದರು
ಇವರು ಕಾಲರುದ್ರರು.

ಸಾವು ಏರಿ ಬಂದರೂ
ಧೈರ್ಯವನ್ನೇ ಮೆರೆದರು
ವಿಜಯವನ್ನು ತಂದರು.

ಯುದ್ಧದಲ್ಲಿ ವ್ಯಾಘ್ರರು
ಧಾಳಿಯಲ್ಲಿ ಉಗ್ರರು
ನೀನು ಹೆತ್ತ ಪುತ್ರರು.

**ಕವಿ ಪರಿಚಯ:**



ಡಿ .ವಿ. ಬಡಿಗೇರ ಅವರು ೧೯೫೧ರಲ್ಲಿ ಗದಗದಲ್ಲಿ ಜನಿಸಿದರು. ಇವರ ಪೂರ್ಣ ಹೆಸರು **ದ್ಯಾವಣ್ಣ ವಿರೂಪಾಕ್ಷಪ್ಪ ಬಡಿಗೇರ**. ಇವರು ಚುಟುಕಗಳನ್ನು ಜೇನ ಹನಿಗಳಂತೆ ಎಂದು ಭಾವಿಸಿ ಚುಟುಕಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದರು. ಇವರು ಉದ್ಯೋಗಿಯಾಗಿ ಸೇರಿದ್ದು ೧೯೭೭ರಲ್ಲಿ. ಆಫೀಸಿನಲ್ಲಿ ಜಲಜಾಕ್ಷಿ, ಮದನೋತ್ಸವ, ನವದೀಪ್ತಿ, ಸ್ನೇಹಾ ಮುಂತಾದ ಹನಿಗವನ, ಕವನ ಸಂಕಲನಗಳನ್ನು ಇವರು ಪ್ರಕಟಿಸಿದ್ದಾರೆ. ಸಂಕ್ರಮಣ ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನ, ಮುಕ್ತಕ ಸಾಹಿತ್ಯ ಪರಿಷತ್ತಿನಿಂದ ಪ್ರಶಸ್ತಿ, ಸನ್ಮಾನ, ಗದಗ ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಹೊಣೆ, ಇವೇ ಮೊದಲಾದವು ಇವರಿಗೆ ಸಂದ ಗೌರವ ಹಾಗೂ ಸನ್ಮಾನಗಳು.

***ಈ ಪದ್ಯವನ್ನು 'ಸುವರ್ಣಸಂಭ್ರಮ' ಗ್ರಂಥದಿಂದ ಆಯ್ದುಕೊಳ್ಳಲಾಗಿದೆ.***



**ಪದಗಳ ಅರ್ಥ:**

ಸಂತತಿ – ವಂಶ; ಅಂಜು – ಹೆದರು; ಅರಿ – ಶತ್ರು; ಪುತ್ರರತ್ನ – ಶ್ರೇಷ್ಠರಾದ ಪುತ್ರರು; ಗಡಿ – ದೇಶದ ಕೊನೆಯ ಭಾಗ, ಎಲ್ಲೆ, ಅಂಚು; ಎದೆಯ ಒಡ್ಡಿ – ಎದುರಿಸಿ; ಬದ್ಧರು – ಸ್ವ ಇಚ್ಛೆಯಿಂದ ತೊಡಗಿಸಿಕೊಂಡವರು; ಧಾಳಿ – ಆಕ್ರಮಣ.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ಸೈನಿಕರು ಶತ್ರುಗಳನ್ನು ಹೇಗೆ ಕೊಂದರು?

೨. ಸೈನಿಕರು ಎದೆಯ ಒಡ್ಡಿ ನಿಂತುದು ಏಕೆ?

೩. ಸೈನಿಕರು ಎಂತಹ ಸಂದರ್ಭದಲ್ಲಿ ಸೇವೆಗೆ ಬದ್ಧರು?

೪. ಸೈನಿಕರನ್ನು ಕಾಲರುದ್ರರು ಎಂದು ಕರೆಯಲು ಕಾರಣವೇನು?

೫. ಎಂತಹ ಸನ್ನಿವೇಶದಲ್ಲಿ ಸೈನಿಕರು ಧೈರ್ಯವನ್ನು ಮೆರೆದರು?

೬. ಯುದ್ಧದ ಸಮಯದಲ್ಲಿ ಸೈನಿಕರನ್ನು ಯಾರಿಗೆ ಹೋಲಿಸಲಾಗಿದೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಪುತ್ರರತ್ನರು ಏನು ಮಾಡಿದರು?

೨. ಯುದ್ಧದಲ್ಲಿ ಸೈನಿಕರ ಶೌರ್ಯವನ್ನು ಈ ಕವನದಲ್ಲಿ ಹೇಗೆ ವರ್ಣಿಸಲಾಗಿದೆ?

## – ಪ್ರಾಯೋಗಿಕ ಚಟುವಟಿಕೆ –

**ಅ. ಪದ್ಯದ ಈ ಸಾಲಿನಂತೆ ನೀವು ಇತರ ಸಾಲುಗಳನ್ನು ಪ್ರಾಸಬದ್ಧವಾಗಿ ರಚಿಸಲು ಪ್ರಯತ್ನಿಸಿರಿ.**

'ಅರಿಯ ಕುಟ್ಟಿ ಕೊಂದರು'

***ಉದಾ:*** ಕೀರ್ತಿ ಜಲದಿ ಮಿಂದರು

.......................................

.......................................

.......................................

**ಆ. ಬೆಟ್ಟದ ಕೊನೆಯ ಭಾಗವನ್ನು ಸೂಚಿಸಲು ಬೆಟ್ಟದ ತುದಿ ಎನ್ನುತ್ತೇವೆ. ಹೀಗೆಯೇ ಕೆಳಗಿನವುಗಳ ಕೊನೆಯ ಭಾಗವನ್ನು ಸೂಚಿಸುವ ಪದಗಳನ್ನು ಆವರಣದಿಂದ ಆರಿಸಿ ಬರೆಯಿರಿ (ಗಡಿ, ಅಂಚು, ತುದಿ)**

ಸೀರೆಯ ಕೊನೆಯಭಾಗ .......................................

ದೇಶದ ಕೊನೆಯ ಭಾಗ .......................................

ಮರದ ಕೊನೆಯ ಭಾಗ .......................................



**ದೇಶಸೇವೆಯೇ ಈಶಸೇವೆ**



# ೬. ಬಾಲ್ಯದ ನೆನಪುಗಳು (ಗದ್ಯ)

– ಕೆ ಶಿವರಾಮ ಕಾರಂತ

**ಆಶಯ:** ಬಾಲ್ಯಜೀವನ ಪ್ರತಿಯೊಬ್ಬರಲ್ಲೂ ಅಚ್ಚಳಿಯದ ನೆನಪುಗಳನ್ನು ಮೂಡಿಸುತ್ತದೆ. ಚಿಕ್ಕಂದಿನಲ್ಲಿ ಆಡಿದ ಆಟಗಳು, ನೋಡಿದ ದೃಶ್ಯಗಳು, ಕೇಳಿದ ಹಾಡುಗಳು, ಓದಿದ ಪುಸ್ತಕಗಳು, ಆಲಿಸಿದ ಪಾಠಗಳು ಮನಸ್ಸಿನಲ್ಲಿ ಎಂದೆಂದಿಗೂ ಉಳಿದುಬಿಡುತ್ತವೆ. ಈ ನೆನಪುಗಳು ಅತ್ಯಂತ ಸಂತೋಷದಾಯಕವಾದವುಗಳೂ ಹೌದು. ಇಂತಹ ನೆನಪುಗಳನ್ನು ಈ ಪಾಠದಲ್ಲಿ ಶಿವರಾಮಕಾರಂತರು ಮೆಲುಕುಹಾಕುತ್ತಾರೆ. ಆ ಮೂಲಕ ಓದುಗರೆಲ್ಲರಿಗೂ ತಮ್ಮ ಬಾಲ್ಯಜೀವನದ ಸವಿಗನಸುಗಳನ್ನು ನೆನಪಿಸಿಕೊಳ್ಳಲು ಕಾರಂತರು ಈ ಲೇಖನದ ಮೂಲಕ ಅನುವುಮಾಡಿಕೊಟ್ಟಿದ್ದಾರೆ.

ನೀವು ಚಿಕ್ಕ ಬೆಕ್ಕಿನ ಮರಿಯನ್ನು ಕಂಡಿದ್ದೀರಾ, ನಾಯಿಮರಿಗಳು ಒಂದರೊಡನೊಂದು ಕಚ್ಚಿ, ಉರುಳುವುದನ್ನು ಕಂಡಿದ್ದೀರಾ! ಹೂಂ–ನೋಡದೆ ಉಂಟೇ? ಆದರೂ, ನನ್ನ ಅಪ್ಪ, ಅಣ್ಣ, ಅಜ್ಜ, ಅಮ್ಮ–ಎಲ್ಲರೂ ನನ್ನನ್ನು ಮುದ್ದಿಸಿದವರೇ. ತೀರ ಚಿಕ್ಕವನಿದ್ದಾಗ–ದೂರ ಓಡಾಡಲು ತ್ರಾಣವಿಲ್ಲದಾಗ–ಎತ್ತಿಕೊಂಡು ಅಲೆದಾಡಿದವರು; ಹಾರುವ ಹಕ್ಕಿಯನ್ನು ತೋರಿಸಿದ್ದಾರೆ, ಜಿಗಿಯುವ ಕೋತಿಯನ್ನು ತೋರಿಸಿದ್ದಾರೆ, ನನ್ನ ಸಂತೋಷಕ್ಕಾಗಿ ಏನೆಲ್ಲ ಮಾಡಿದ್ದಾರೆ.

ನಾನು ಹುಟ್ಟಿದ ಕೋಟ–ಎಂಬ ಊರಿಗೆ ವರುಣತೀರ್ಥ ಪೇಟೆ ಎಂಬ ಹೆಸರಿತ್ತು. ಇಂದು ಅದನ್ನು 'ಕೋಟ' ಎಂದು ಕರೆಯುತ್ತಾರೆ. ಈ ಊರಿನ ಪಡುವಣಕ್ಕೆ, ಮೂಡಣಕ್ಕೆ–ಕೆಲವು ಮೈಲುಗಳ ದೂರ ಬಯಲು ಭೂಮಿ. ಅದು, ಮಳೆಗಾಲದಲ್ಲಿ ಬತ್ತದ ಬೆಳೆ ಬೆಳೆಯುವ ಹಸಿರು ಚಾಪೆ. ಬತ್ತ ಬೆಳೆಯುವ ಕೆಲಸ ನಮಗೆ ಇಲ್ಲದೆ, ದಿನ ಹೋಗದು. ಉಣ್ಣಲು ಅಕ್ಕಿ ಬೇಡವೇ! ಬತ್ತ ಸುಮ್ಮನೆ ಬೆಳೆಯದು. ಅದಕ್ಕೆ ಗೊಬ್ಬರ ಬೇಕು. ನಮ್ಮ ಗ್ರಾಮದಲ್ಲಿ ಅಲ್ಲಲ್ಲಿ ಹಚ್ಚ ಹಸುರಿನ ಹಾಡಿಗಳಿವೆ. ಹಾಡಿ ಎಂದರೆ, ನಟ್ಟು ಬೆಳೆಯಿಸಿದ, ಬೇಲಿ ಹಾಕಿ ರಕ್ಷಿಸಿದ ಕಾಡುಗಳು. ಇವು ಊರಲ್ಲಿ ಅಲ್ಲಲ್ಲಿ ಇದ್ದುವು. ಅವು ಯಾಕೆ ಬೇಕು? ಗೊಬ್ಬರಕ್ಕೆ ಸೊಪ್ಪು ಬೇಕಾದರೆ ಗಿಡಮರ ಬೇಕು.

ನಮ್ಮ ಊರಿನ ೧೨ ಮೈಲು ಹೆದ್ದಾರಿಯ ಉದ್ದಕ್ಕೂ ಅಲ್ಲಲ್ಲಿ ಹಾಡಿಗಳಿದ್ದುವು. ನಾವು ಅದನ್ನು ಹೊಕ್ಕು, ಹುಡುಕಿದವರು. ಯಾಕೆ ಗೊತ್ತೆ? ಅಲ್ಲಿ, ಸದಾ ಕೆಂಪು ಕಿಸ್ಕಾರ ಹಣ್ಣು ಸಿಕ್ಕೀತು; ಗೋವೆ ಹಣ್ಣೂ ಸಿಕ್ಕೀತು. ಮಳೆಗಾಲದಲ್ಲಿ ಬಾಯಿಯೆಲ್ಲ ನೇರಳೆ ಬಣ್ಣ ಆಗುವ ನೇರಿಳೆ ಹಣ್ಣು ಸಿಕ್ಕೀತು.

ನಿಮಗೆ ಮೀಯುವ ಆಸೆಯಾದರೆ ಬನ್ನಿ. ಹಿಂದೆ ವರುಣತೀರ್ಥ ಎಂದೆನಲ್ಲ–ಅದೇನು ಗೊತ್ತೇ? ಅದು, ಬಲು ವಿಶಾಲವಾದ, ನಾಲ್ಕು ಸುತ್ತೂ ಕಲ್ಲು ಕಟ್ಟಿದ ಅದ್ಭುತ ಕೆರೆ! ಅದರಲ್ಲಿ ಸೊಂಟದಷ್ಟು ಆಳದ ನೀರು ಮಾತ್ರ. ಅದರಲ್ಲಿ ಹೋಗಿ ಮುಳುಗುವವರು ನಾವು–ಈಜು ಕಲಿತ ಬಳಿಕ.

ನಾನು ಅದರಲ್ಲಿ ಎಷ್ಟು ಹೊರಳಾಡಿದೆನೋ ತಿಳಿಯೆ. ಅದರ ಸೊಗಸನ್ನು ಹೇಳತೀರದು. ಅದರ ದಂಡೆಯ ಬಳಿಯ ಹೊನ್ನೆ ಮರಗಳಲ್ಲಿ ಕಾಯಿ ಆಗುತ್ತದೆ. ಅಲ್ಲಿ, ಕೊಕ್ಕರೆಗಳು ಬಂದು ಬಿಡಾರ ಮಾಡುತ್ತವೆ. ನೀರಿನ ಮೇಲೆ ಆಗಾಗ ಎರಡು ತೆರನ ಮೀನ್ಚುಳ್ಳಿಗಳು ಬಂದು ಥಟ್ಟನೆ ಎರಗಿ, ಮೀನಿನ ಬೇಟೆ ಆಡುತ್ತವೆ.

ಮಳೆಗಾಲದಲ್ಲಿ ಕೆಲವು ಬಾರಿ ಅಲ್ಲಿಗೆ, ಇನ್ನೊಂದು ಊರಿಂದ ನೀರ್ಕಾಗೆಗಳು ಬರುವುದುಂಟು! ಅವೋ, ನೀಳಕತ್ತಿನ, ಕರಿಯ ಮೈಯ, ನೀರಲ್ಲಿ ಈಜಬಲ್ಲ ಪಕ್ಷಿಗಳು!







ನಮ್ಮಲ್ಲಿ ಹೊಳೆಯಿದೆ, ಕಡಲಿದೆ ಎಂದರೆ ನಿಮಗೆ ಬಾಯಲ್ಲಿ ನೀರು ಊರೀತು. ಅದೇನೇ ಅರಬ್ಬೀ ಸಮುದ್ರ! ಹತ್ತು, ಹದಿನೆರಡು ಮೈಲು ದೂರಕ್ಕೆ ಚಾಚುವ ಅದರ ಮರಳಿನ ದಂಡೆ–ಏರುತಗ್ಗಿಲ್ಲದ ಮರಳಿನ ಹಾಸುಗೆ. ದಿನಕ್ಕೆ ಎರಡು ಬಾರಿ ಆ ಕಡಲಿನ ನೀರು ಉಬ್ಬುತ್ತದೆ, ತಗ್ಗುತ್ತದೆ! ಅದರ ತೆರೆಗಳು ಬಲು ದೂರದಿಂದ ಉರುಳುರುಳಿ ಬರುತ್ತವೆ! ಅವು, ದೂರದ ಅಲೆಯಾಗಿ ಬಂದು–ನೆಲ ಸಮೀಪಿಸಿದಾಗ ಎತ್ತರದ ದಂಡೆಯಾಗಿ, ಅನಂತರ ಮುರಿದು, ಉರುಳುವ ನೋಟ–ಮರೆಯಲಾರದ್ದು!

ನಮ್ಮ ಊರಿನ ಕಡಲ ತೀರ ಬಲು ಸುಂದರ. ಅಲ್ಲಿ ಆಳ ಕಡಿಮೆ. ಊರವರು ಅಮಾವಾಸ್ಯೆ ದಿನ ಹಿಂಡು ಹಿಂಡಾಗಿ ಹೋಗುತ್ತಾರೆ–ಮೀಯಲು. ಇವೇ ಸಮಯಗಳಲ್ಲಿ ಊರಿನ ಬೆಸ್ತರು, ಉದ್ದದ ಬಲೆಗಳನ್ನು ಕಡಲ ದೂರಕ್ಕೆ ಒಯ್ದು, ಬಲೆ ಇಳಿಸಿ, ಹಿಂದೆ ಬಂದು, ಅದರ ಎರಡು ಕಡೆಗಳಿಂದಲೂ ಎಳೆಯುತ್ತಾರೆ.

ನೀವು ನಂಬಲಾರಿರಿ–ದಂಡೆಗೆ ಬಂದು ಬೀಳುವ ಮೀನಿನ ರಾಶಿರಾಶಿ ಕಾಣುತ್ತೀರಿ. ಊರಿನ ಬೆಸ್ತರಿಗೆ ಅದೇ ಹಬ್ಬ. ತೆರತೆರನ ಮೀನುಗಳಿವೆ! ಅವುಗಳ ನಡುವೆ ಒಂದೊಂದು ವಿಷದ ಹಾವು ಇರುವುದೂ ಉಂಟು!

ಇಷ್ಟನ್ನೆಲ್ಲ ಕೇಳಿದ ನಿಮಗೆ –ನಮ್ಮ ಊರಿಗೇ ಬಂದು ಇರುವ ಮನಸ್ಸಾದೀತು! ನಮ್ಮ ಊರಲ್ಲಿ ಇನ್ನೇನಿಲ್ಲವೇ ಎಂದು ಕೇಳುವಿರಿ! ಇಲ್ಲದೆ ಉಂಟೇ–ಊರೆಂದ ಮೇಲೆ ಇರಲೇಬೇಕು.

## ಲೇಖಕರ ಪರಿಚಯ :



'ಕಡಲ ತೀರದ ಭಾರ್ಗವ' ಎಂದೇ ಪ್ರಸಿದ್ಧರಾದ ಕೋಟ ಶಿವರಾಮಕಾರಂತರು ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕೋಟ ಎಂಬಲ್ಲಿ ೧೯೦೨ ರಲ್ಲಿ ಜನಿಸಿದರು. 'ಮರಳಿ ಮಣ್ಣಿಗೆ', 'ಅಳಿದ ಮೇಲೆ', 'ಬೆಟ್ಟದ ಜೀವ', 'ಮೈಮನಗಳ ಸುಳಿಯಲ್ಲಿ', 'ಚೋಮನ ದುಡಿ' ಇವು ಕಾರಂತರ ಕೆಲವು ಕೃತಿಗಳು. ಇವರ 'ಮೈಮನಗಳ ಸುಳಿಯಲ್ಲಿ' ಕೃತಿಗೆ ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ, 'ಯಕ್ಷಗಾನ ಬಯಲಾಟ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ 'ಮೂಕಜ್ಜಿಯ ಕನಸುಗಳು' ಕೃತಿಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಮುಂತಾದ ಅನೇಕ ಪ್ರಶಸ್ತಿಗಳು ಲಭಿಸಿವೆ.



***ಈ ಪಾಠವನ್ನು 'ಶಿವರಾಮ ಕಾರಂತರ ಲೇಖನಗಳು' ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ.***

## ಪದಗಳ ಅರ್ಥ:

ಮೂಡಣ – ಪೂರ್ವ; ಪಡುವಣ – ಪಶ್ಚಿಮ; ಬಡಗಣ – ಉತ್ತರ; ತೆಂಕಣ – ದಕ್ಷಿಣ; ಉಣ್ಣು– ಊಟ ಮಾಡು; ದೈತ್ಯ – ಅಸುರ, ರಾಕ್ಷಸ; ತ್ರಾಣ – ಶಕ್ತಿ, ಕಸುವು; ಕೆಂಪು ಕಿಸ್ಕಾರ ಹಣ್ಣು – ಒಂದು ಜಾತಿಯ ಹಣ್ಣು; ಗೋವೆ ಹಣ್ಣು – ಒಂದು ಜಾತಿಯ ಹಣ್ಣು; ಮೀಯಿಸು – ಸ್ನಾನ ಮಾಡಿಸು, ತೊಳೆ; ಬೆಸ್ತರು – ಮೀನು ಹಿಡಿಯುವವರು.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. 'ಕೋಟ' ಎಂಬ ಊರಿಗೆ ಇದ್ದ ಮತ್ತೊಂದು ಹೆಸರೇನು?

೨. ಕಾರಂತರಿಗೆ ಅವರ ಹಿರಿಯರು ಹೇಗೆ ಪ್ರೀತಿ ತೋರಿಸಿದರು?

೩. ಲೇಖಕರು ಚಿಕ್ಕವರಿರುವಾಗ ಅವರ ಹಿರಿಯರು ಆಡಿಸಿದುದು ಹೇಗೆ?

೪. ಹಾಡಿಗಳು ಏಕೆ ಬೇಕು?

೫. ಹಾಡಿಗಳಲ್ಲಿ ಲೇಖಕರಿಗೆ ಏನು ಸಿಗುತ್ತಿತ್ತು?

೬. ಮೀನ್ಮುಳ್ಳಿಗಳು ಕೆರೆಯಲ್ಲಿ ಏನು ಮಾಡುತ್ತವೆ?

೭. ಅಮಾವಾಸ್ಯೆಯ ದಿನ ಊರವರು ಹಿಂಡು ಹಿಂಡಾಗಿ ಎಲ್ಲಿಗೆ ಹೋಗುತ್ತಿದ್ದರು?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಕೋಟ ಪ್ರದೇಶವನ್ನು ವರ್ಣಿಸಿರಿ

೨. ವರುಣತೀರ್ಥದ ವೈಶಿಷ್ಟ್ಯವೇನು?

**ಇ. ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ**

ನಾಲ್ಕಾರು, ಒಂದೆರಡು, ಆಸೆಯಾದರೆ, ಬೇರೊಂದು, ವರ್ಷಕ್ಕೊಮ್ಮೆ

**ಈ. ಕೆಳಗೆ ಬಿಡಿಸಿಕೊಟ್ಟಿರುವ ಪದಗಳನ್ನು ಕೂಡಿಸಿ ಬರೆಯಿರಿ**

ದಂಡೆ+ಆಗಿ :

ಚಿಕ್ಕವನು+ಇದ್ದಾಗ :

ಒಂದು+ಒಂದು :

**ಉ. ಮಾದರಿಯಂತೆ ಬರೆಯಿರಿ:**

ನೋಡು – ನೋಟ

ಮಾಡು –

ಕಾಡು –

ಓಡು –

**ಊ.ಮಾದರಿಯಂತೆ ಬಿಟ್ಟ ಸ್ಥಳಗಳನ್ನು ಭರ್ತಿಮಾಡಿ:**

| | | |
|---|---|---|
| ಅನಿಸಲಿ | ಅನಿಸದು | ಅನಿಸೀತು |
| ಮಾಡಲಿ | | ಮಾಡೀತು |
| ಸಿಕ್ಕಲಿ | ಸಿಗದು | |
| ಬಿಡಲಿ | | ಬಿಟ್ಟೀತು |
| ಕೊಡಲಿ | | ಕೊಟ್ಟೀತು |
| ಕೇಳಲಿ | | ಕೇಳೀತು |

**ಋ. ಕೆಳಗೆ ದಿಕ್ಕುಗಳನ್ನೂ ಅವುಗಳ ಸಮಾನಾರ್ಥಕ ಪದಗಳನ್ನೂ ಕೊಡಲಾಗಿದೆ. ಅರ್ಥಕ್ಕೆ ಅನುಗುಣವಾಗಿ ಹೊಂದಿಸಿ ಬರೆಯಿರಿ**

| 'ಎ' ಪಟ್ಟಿ | 'ಬಿ' ಪಟ್ಟಿ |
|---|---|
| ಮೂಡಣ | ಪಶ್ಚಿಮ |
| ತೆಂಕಣ | ಉತ್ತರ |
| ಪಡುವಣ | ಪೂರ್ವ |
| ಬಡಗಣ | ದಕ್ಷಿಣ |

**ಎ. ಕೆಳಗಿನ ಪದಗಳನ್ನು ಬಳಸಿ ಅರ್ಥವತ್ತಾದ ವಾಕ್ಯಗಳನ್ನು ರಚಿಸಿ**

ಸಂತೋಷ, ಮಳೆಗಾಲ, ಗುಮ್ಮ, ದೈತ್ಯ.



## – ಪ್ರಾಯೋಗಿಕ ಚಟುವಟಿಕೆ –

**ಅ. ಈ ಪದಗಳನ್ನು ತರಗತಿಯಲ್ಲಿ ಗಟ್ಟಿಯಾಗಿ ಹೇಳಿರಿ.**

ಬಾಲ್ಯ, ಶಿವರಾಮ ಕಾರಂತ, ಉರುಳುರುಳಿ, ಮುದ್ದಿಸು, ಸಂತೋಷ, ಪಡುವಣ, ಮೂಡಣ, ತೆಂಕಣ, ಬಡಗಣ, ಕೋಟ, ಬತ್ತ, ಉಣ್ಣು, ಗೊಬ್ಬರ, ಹೆದ್ದಾರಿ, ಏರುತಗ್ಗು.

**ಆ. ಕೆಳಗಿನ ವಾಕ್ಯಗಳಿಗೆ ಸರಿಯಾದ ಸ್ಥಳದಲ್ಲಿ ಸೂಕ್ತ ಲೇಖನಚಿಹ್ನೆ ಹಾಕಿರಿ**

೧. ಉಣ್ಣಲು ಅಕ್ಕಿ ಬೇಡವೇ

೨. ವರುಣತೀರ್ಥ ಅಂದೆನಲ್ಲ ಅದೇನು ಗೊತ್ತೇ

೩. ನಮ್ಮ ಊರಿಗೇ ಬಂದು ಇರುವ ಮನಸ್ಸಾದೀತು

**ಇ. ಕೆಳಗಿನ ಚಿತ್ರಗಳನ್ನು ಆಧರಿಸಿ ಎರಡೆರಡು ವಾಕ್ಯ ರಚಿಸಿ**







## – ವ್ಯಾಕರಣಾಭ್ಯಾಸ –

**ಈ. ಕೆಳಗಿನ ವಾಕ್ಯಗಳಲ್ಲಿ ಅಡಿಗೆರೆ ಹಾಕಿರುವ ಪದಗಳಲ್ಲಿ ಕಾಣುವ ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿ:**

೧. ನಾನು ಅದರಲ್ಲಿ ಎಷ್ಟು ಹೊರಳಾಡಿದೆನೋ ತಿಳಿಯೆ.

೨. ಅದರ ಮರಳಿನ ದಂಡೆ – ಏರುತಗ್ಗಿಲ್ಲದ ಮರಳಿನ ಹಾಸಿಗೆ.

೩. ಬೆಸ್ತರು ಉದ್ದದ ಬಲೆಗಳನ್ನು ಬೀಸುತ್ತಾರೆ.

೪. ದಂಡೆಗೆ ಬಂದು ಬೀಳುವ ಮೀನಿನ ರಾಶಿ ಕಾಣುತ್ತೀರಿ.






✤ ✤ ✤ ✤ ✤

# ೭. ನೆನಪಿದೆಯೆ ನಿನಗೆ? (ಪದ್ಯ)

– ಡಾ|| ಜಿ.ಎಸ್. ಶಿವರುದ್ರಪ್ಪ

**ಆಶಯ:** ಪ್ರತಿಯೊಬ್ಬರೂ ಬೆಳೆಯುತ್ತಾ ಹೋದಂತೆ ತಮ್ಮ ತಮ್ಮ ಬಾಲ್ಯಜೀವನವನ್ನು ನೆನಪಿಸಿಕೊಳ್ಳಲು ಇಷ್ಟಪಡುತ್ತಾರೆ. ಅದು ತುಂಬಾ ಸವಿಯಾದ ನೆನಪಾಗಿರುತ್ತದೆ. ಇಲ್ಲಿ ಕವಿ ಜಿ ಎಸ್ ಶಿವರುದ್ರಪ್ಪನವರು ತಮ್ಮ ಗೆಳತಿಯೊಡನೆ ಬಾಲ್ಯದಲ್ಲಿ ಕಳೆದ ಸವಿಯಾದ ಘಟನೆಗಳನ್ನು ನೆನಪಿಸಿಕೊಂಡು ಅವು ಮರುಕಳಿಸಬೇಕೆಂದು ಆಶಿಸುತ್ತಾರೆ.

ನಾವಿಬ್ಬರೂ ಅಂದು
ಹೊಳೆಯ ದಡದಲಿ ನಿಂದು
ಮರಳುಮನೆಗಳ ಕಟ್ಟಿ
ಆಟವಾಡಿದ ದಿವಸ
ನೆನಪಿದೆಯೆ ನಿನಗೆ?

ಮುಂಗಾರುಮಳೆ ಹೊಯ್ದು
ನಾವಿಬ್ಬರೂ ತೊಯ್ದು–
ನಿಂತಾಗ ಮರಳಮನೆ
ಕೊಚ್ಚಿಹೋದಾ ದಿವಸ
ನೆನಪಿದೆಯೆ ನಿನಗೆ?





ಈ ಮರಳು ನನಗೆಂದು
ಆ ಮರಳು ತನಗೆಂದು
ಹೊಡೆದಾಡಿ ಜತೆ ಬಿಟ್ಟು
ಆಟವಾಡಿದ ದಿವಸ
ನೆನಪಿದೆಯೆ ನಿನಗೆ?





ಮರುದಿವಸ ಒಂದಾಗಿ
ಮರಳುಮನೆಗಳ ಕಟ್ಟಿ
ಕೈಯ್ಯ ಚಪ್ಪಳೆ ತಟ್ಟಿ
ಹಾಡಿಕುಣಿದಾ ದಿವಸ
ನೆನಪಿದೆಯೆ ನಿನಗೆ?

ಅಂದು ಹರಿದಾ ಹೊಳೆಯೆ
ಇಂದಿಗೂ ಹರಿಯುತಿದೆ:
ಬಾ ಗೆಳತಿ ಮತ್ತೊಮ್ಮೆ ಆಟವಾಡೋಣ,
ಬಾಲ್ಯದುದ್ಯಾನವನು ಮರಳಿ ಕಟ್ಟೋಣ!

**ಕವಿ ಪರಿಚಯ :**



ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ೧೯೨೬ ನೇ ಇಸವಿ ಫೆಬ್ರವರಿ ೭ನೇ ತಾರೀಖು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರಿನಲ್ಲಿ ಜನಿಸಿದರು. ಇವರು ಮೈಸೂರು, ಬೆಂಗಳೂರು ಮತ್ತು ಉಸ್ಮಾನಿಯ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿರುತ್ತಾರೆ. ಸಾಮಗಾನ, ಪ್ರೀತಿ ಇಲ್ಲದ ಮೇಲೆ, ಕಾರ್ತೀಕ, ದೀಪದ ಹೆಜ್ಜೆ, ದೇವಶಿಲ್ಪಿ ಮೊದಲಾದವು ಇವರ ಕೆಲವು ಸಂಕಲನಗಳು. ಇವರು **ರಾಷ್ಟ್ರಕವಿ** ಪುರಸ್ಕಾರವನ್ನು ಪಡೆದಿದ್ದು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ, **ನೃಪತುಂಗ** ಪ್ರಶಸ್ತಿ ಹೀಗೆ ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

***ಈ ಕವನವನ್ನು ಇವರ 'ಪ್ರೀತಿ ಇಲ್ಲದ ಮೇಲೆ' ಎಂಬ ಕವನಸಂಕಲನದಿಂದ ಆರಿಸಲಾಗಿದೆ.***



**ಪದಗಳ ಅರ್ಥ :**

ಹೊಳೆ – ನದಿ; ತೊಯ್ದು – ನೀರಿನಿಂದ ನೆನೆದು; ಮರಳು – ಉಸುಕು; ಮರಳಿ – ಮತ್ತೆ (ಪುನಃ); ಉದ್ಯಾನ – ತೋಟ; ಜತೆ ಬಿಡು – ಸಂಗ ಬಿಡು

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ನಾವಿಬ್ಬರೂ ಎಂದರೆ ಈ ಕವನದಲ್ಲಿ ಯಾರು ಯಾರು?

೨. ಕವಿ ಗೆಳತಿಯೊಂದಿಗೆ ಹೊಳೆಯದಡದಲ್ಲಿ ಆಟವಾಡಿದ ಬಗೆ ಹೇಗೆ?

೩. ಅವರಿಬ್ಬರು ಜಗಳವಾಡಲು ಕಾರಣವೇನು?

೪. ಮುಂಗಾರು ಮಳೆಗೆ ಸಂಬಂಧಿಸಿದಂತೆ ಕವಿ ನೆನಪಿಸಿಕೊಳ್ಳುವುದೇನು?

೫. ಕೈ ಚಪ್ಪಾಳೆ ತಟ್ಟಿದುದು ಯಾವಾಗ?

೬. ಕವಿ ಏನನ್ನು ಮರಳಿ ಕಟ್ಟಲು ಕರೆ ಕೊಟ್ಟಿದ್ದಾರೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಕವಿ ಗೆಳತಿಯ ಜೊತೆ ಕಟ್ಟಿದ ಮರಳ ಮನೆ ಕೊಚ್ಚಿಹೋಗಲು ಕಾರಣವೇನು?

೨. ಮರಳು ಮನೆಯನ್ನು ಕಟ್ಟಿ ಕವಿ ಮತ್ತು ಅವರ ಗೆಳತಿ ಆಟವಾಡಿದ ಬಗೆ ಹೇಗೆ?

೩. ಬಾಲ್ಯದುದ್ಯಾನವನು ಕಟ್ಟಲು ಕವಿ ಗೆಳತಿಯನ್ನು ಹೇಗೆ ಕರೆದಿದ್ದಾರೆ?

ಇ. **ಬಿಡಿಸಿ ಬರೆದಿರುವ ಪದಗಳನ್ನು ಸೇರಿಸಿ ಬರೆಯಿರಿ:**

ಕೊಚ್ಚಿಹೋದ + ಆ ದಿವಸ

ಹೊಡೆದು + ಆಡಿ

ನಾವು + ಇಬ್ಬರೂ

ಆಟ + ಆಡಿದ

ಆಟ + ಆಡೋಣ

## – ಪ್ರಾಯೋಗಿಕ ಚಟುವಟಿಕೆ –

ಅ. **ಕೆಳಗಿನ ಪದಗಳನ್ನು ಗಟ್ಟಿಯಾಗಿ ಹೇಳಿರಿ:**

ಕೊಚ್ಚಿಹೋದಾದಿವಸ, ಕೈಯ್ಯ ಚಪ್ಪಾಳೆ, ಬಾಲ್ಯದುದ್ಯಾನ

ಆ. **ಬಿಟ್ಟಿರುವ ಸಾಲುಗಳನ್ನು ಸೇರಿಸಿ ನಿಮ್ಮ ಸಹಪಾಠಿಗಳೆದುರು ಗಟ್ಟಿಯಾಗಿ ಹೇಳಿರಿ**

೧. ಮರಳು ಮನೆಗಳ ಕಟ್ಟಿ

................................

ನೆನಪಿದೆಯೆ ನಿನಗೆ?

೨. ನಿಂತಾಗ ಮರಳ ಮನೆ

................................

ನೆನಪಿದೆಯೆ ನಿನಗೆ?

೩. ಹೊಡೆದಾಡಿ ಜತೆಬಿಟ್ಟು

................................

ನೆನಪಿದೆಯೆ ನಿನಗೆ?

೪. ಕೈಯ ಚಪ್ಪಳೆ ತಟ್ಟಿ

................................

ನೆನಪಿದೆಯೆ ನಿನಗೆ?

ಇ. ಮಣ್ಣಿನಲ್ಲಿ ಆಡುತ್ತಿರುವ ಈ ಮಕ್ಕಳ ಚಿತ್ರವನ್ನು ಆಧರಿಸಿ (ಇಬ್ಬರಿಗೂ ನಿಮಗೆ ಇಷ್ಟವಾದ ಹೆಸರಿಡಿ) ಎರಡು ವಾಕ್ಯಗಳನ್ನು ಬರೆಯಿರಿ



ಈ. ನಿಮ್ಮ ಬಾಲ್ಯದ ನೆನಪುಗಳನ್ನು ನಿಮ್ಮ ತರಗತಿಗಳಲ್ಲಿ ಗಟ್ಟಿಯಾಗಿ ಹಂಚಿಕೊಳ್ಳಿ.

ಉ. ನಿಮಗೆ ಹೀಗೆ ಚಪ್ಪಾಳೆ ಹಾಕಬೇಕು ಎಂದೆನಿಸುವ / ಎಂದೆನಿಸಿದ ಕ್ಷಣಗಳನ್ನು ತರಗತಿಯಲ್ಲಿ ವಿವರಿಸಿ





| ಬಾಲ್ಯದ ನೆನಪಿನ ರವಿ ಬರುವನು ಅರಸುತ ಸವಿ |
| --- |



# ೮. ಚಿನ್ನದ ಗೊಂಬೆಗಳು (ಗದ್ಯ)

**ನಲಿ–ಕಲಿ ಸಾಹಿತ್ಯ**

**ಆಶಯ:** ರಾಜಮಹಾರಾಜರ ಆಸ್ಥಾನದಲ್ಲಿ ಕವಿಗಳು, ಪಂಡಿತರು , ಕಲಾವಿದರು ತಮ್ಮ ಜಾಣ್ಮೆಯನ್ನು ಮೆರೆದು ರಾಜರಿಂದ ಮೆಚ್ಚುಗೆಯನ್ನು ಪಡೆದ ಉದಾಹರಣೆಗಳು ಇತಿಹಾಸದಲ್ಲಿ ಸಾಕಷ್ಟು ಸಿಗುತ್ತವೆ. ಅಂತಹವರಲ್ಲಿ ಕಾಳಿದಾಸನೂ ಒಬ್ಬ ಎಂಬ ಪ್ರತೀತಿ ಇದೆ. ರಾಜ ವಿಕ್ರಮಾದಿತ್ಯನ ಆಸ್ಥಾನಕ್ಕೆ ಬಂದ ಚಮತ್ಕಾರದ ಗೊಂಬೆಗಳ ರಹಸ್ಯವನ್ನು ಭೇದಿಸಿದ ಕಾಳಿದಾಸನ ಜಾಣ್ಮೆ ಈ ನಾಟಕಭಾಗದಲ್ಲಿ ಪ್ರಕಟವಾಗಿದೆ.

*[ವಿಕ್ರಮಾದಿತ್ಯನ ಆಸ್ಥಾನ, ಮಂತ್ರಿಗಳು, ದಂಡನಾಯಕರು, ಪಂಡಿತರು, ಆಸ್ಥಾನ ವಿದ್ವಾಂಸರು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತಿದ್ದಾರೆ. ಇವರಲ್ಲಿ ಮಹಾಕವಿಯಾದ ಕಾಳಿದಾಸನೂ ಇದ್ದಾನೆ. ಬೊಂಬೆ ತಯಾರಕನೊಬ್ಬ ಮೂರು ಬೊಂಬೆಗಳನ್ನು ತಂದು ರಾಜನಿಗೆ ತೋರಿಸಿ ಹೇಳುತ್ತಿದ್ದಾನೆ.]*

ಬೊಂಬೆ ತಯಾರಕ : ಮಹಾರಾಜರೇ, ಈ ಬೊಂಬೆಗಳನ್ನು ಕೊಂಡುಕೊಂಡು ನನ್ನನ್ನು ಕಾಪಾಡಬೇಕು.

ರಾಜ : (ಬೊಂಬೆಗಳನ್ನು ಗಮನಿಸಿ) ಬೊಂಬೆಗಳು ಚೆನ್ನಾಗಿವೆ. ಇವುಗಳ ಬೆಲೆ ಏನು?

ಬೊಂಬೆ ತಯಾರಕ : ಪ್ರಭು, ಇವು ಸಾಧಾರಣ ಗೊಂಬೆಗಳಲ್ಲ, ವಿಶಿಷ್ಟವಾದ ಬೊಂಬೆಗಳು. ಇವುಗಳ ವೈಶಿಷ್ಟ್ಯವನ್ನು ತಮಗೆ ತಿಳಿಸುತ್ತೇನೆ. ನಂತರ ಬೊಂಬೆಗಳ ಬೆಲೆಗಳನ್ನು ನಿರ್ಧರಿಸಬಹುದು.

ರಾಜ : ಓಹೋ ಹಾಗೇನು? ಆಯಿತು, ಇವುಗಳ ವೈಶಿಷ್ಟ್ಯವನ್ನು ತಿಳಿಸು.

ಬೊಂಬೆ ತಯಾರಕ : (ದಾರವೊಂದನ್ನು ಕೈಯಲ್ಲಿ ಹಿಡಿದು) ನೋಡಿ ಪ್ರಭು, ಈ ದಾರವನ್ನು ಮೊದಲ ಬೊಂಬೆಯ ಕಿವಿಯಲ್ಲಿ ಹಾಕುತ್ತೇನೆ. ದಾರವು ಮತ್ತೊಂದು ಕಿವಿಯಲ್ಲಿ ಹೊರಗೆ ಬರುತ್ತದೆ (ತೋರಿಸುವನು).

ರಾಜ : ಓಹೋ! ಎರಡನೆಯದರ ವೈಶಿಷ್ಟ್ಯವೇನು?

ಬೊಂಬೆ ತಯಾರಕ : ಈ ಬೊಂಬೆಯ ಕಿವಿಯಲ್ಲಿ ದಾರ ಹಾಕುತ್ತೇನೆ... ಅದು ಬಾಯಿಯಿಂದ ಹೊರಕ್ಕೆ ಬರುತ್ತದೆ. ನೋಡಿರಿ (ತೋರಿಸುವನು)

ರಾಜ : ಭೇಷ್! ಮೂರನೆಯದರ ವೈಶಿಷ್ಟ್ಯವೇನು?

ಬೊಂಬೆ ತಯಾರಕ : ಪ್ರಭು, ಈ ಬೊಂಬೆಯ ಕಿವಿಯಲ್ಲಿ ದಾರ ಹಾಕುತ್ತೇನೆ. ಈ ದಾರವು ಇನ್ನೊಂದು ಕಿವಿಯಿಂದಾಗಲೀ ಬಾಯಿಯಿಂದಾಗಲೀ ಹೊರಬರುವುದಿಲ್ಲ. ಒಳಗೇ ಸುತ್ತಿಕೊಳ್ಳುತ್ತದೆ.

ರಾಜ : ನಿನ್ನ ಬೊಂಬೆಗಳು ವಿಚಿತ್ರವಾಗಿವೆ. ನಮ್ಮ ಪಂಡಿತರು ಇವುಗಳ ಬೆಲೆ ನಿರ್ಧರಿಸುತ್ತಾರೆ.

| | | |
|---|---|---|
| ಪಂಡಿತರು | : | ಪ್ರಭು ಬೊಂಬೆಗಳನ್ನು ಚಿನ್ನದಿಂದ ತಯಾರಿಸಲಾಗಿದೆ. ನವರತ್ನಗಳನ್ನು ಕೂಡಿಸಲಾಗಿದೆ. ಇವುಗಳಿಗೆ ಎರಡು ಸಾವಿರ ವರಹಗಳನ್ನು ನೀಡಬಹುದು. |
| ಬೊಂಬೆ ತಯಾರಕ | : | ಪ್ರಭು, ಈ ಬೆಲೆ ಬಹಳ ಕಡಿಮೆಯಾಯಿತು. |
| ರಾಜ | : | ಹಾಗಾದರೆ ಈ ಬೊಂಬೆಗಳಿಗೆ ನೀನು ಬಯಸುವ ಬೆಲೆ ಎಷ್ಟು? |
| ಬೊಂಬೆ ತಯಾರಕ | : | ಮೊದಲ ಬೊಂಬೆಗೆ ಒಂದು ಕಾಸು. ಎರಡನೆಯದಕ್ಕೆ ಸಾವಿರ ವರಹ. ಮೂರನೆಯದಕ್ಕೆ ಕಷ್ಟ, ಆದರೂ ನೂರು ಸಾವಿರ ವರಹ. |





| | | |
|---|---|---|
| ರಾಜ | : | ಸ್ವಲ್ಪ ವೈಶಿಷ್ಟ್ಯತೆಯ ಬೊಂಬೆ ಎಂದರೆ ಇಷ್ಟೊಂದು ಬೆಲೆಯೇ? ಇದು ದುರಾಸೆಯಾಯಿತು. |
| ಕಾಳಿದಾಸ | : | ಪ್ರಭುಗಳು ಮನ್ನಿಸಬೇಕು. ಬೊಂಬೆಗಳಿಗೆ ಬಳಸಿದ ಚಿನ್ನ ನವರತ್ನಗಳಿಗೆ ಇಲ್ಲಿ ಬೆಲೆಯಿಲ್ಲ. ವೈಶಿಷ್ಟ್ಯಕ್ಕೆ ಬೆಲೆ. ದಯವಿಟ್ಟು ರಾಜಸಭೆ ಅದನ್ನು ಅರ್ಥಮಾಡಿಕೊಳ್ಳಬೇಕು. ನಂತರ ಬೆಲೆಯನ್ನು ನಿರ್ಧರಿಸಬೇಕು. |
| ರಾಜ | : | ಅದೇನೆಂದು ವಿವರಿಸಿ ಹೇಳು ಕಾಳಿದಾಸ. |
| ಕಾಳಿದಾಸ | : | ಪ್ರಭು, ಮೊದಲ ಬೊಂಬೆಯಲ್ಲಿ ಒಂದು ಅರ್ಥವಿದೆ. ಗುರುಹಿರಿಯರು ಹೇಳಿದ ಜ್ಞಾನದ ಮಾತುಗಳನ್ನು ಒಂದು ಕಿವಿಯಲ್ಲಿ ಕೇಳಿ ಮತ್ತೊಂದು ಕಿವಿಯಲ್ಲಿ ಬಿಡುವ ಜನರಂತೆ, ಈ ಬೊಂಬೆ. ಇಂಥ ಜನರಿಗೆ ಒಂದು ಕಾಸಿನ ಬೆಲೆ. |
| ರಾಜ | : | ಸೊಗಸಾಗಿದೆ, ಎರಡನೆಯದು? |
| ಕಾಳಿದಾಸ | : | ಕಿವಿಯಿಂದ ಕೇಳಿದ ಮಾತುಗಳನ್ನು ಇತರರಿಗೆ ಹೇಳುವವರು ಮೊದಲಿಗಿಂತ ಉತ್ತಮರು. |

ರಾಜ : ಹಾಂ! ಸ್ವಾರಸ್ಯಕರವಾಗಿದೆ.

ಕಾಳಿದಾಸ : ಇನ್ನು ಮೂರನೆಯದರ ವೈಶಿಷ್ಟ್ಯ. ತಾನು ಕೇಳಿದ್ದನ್ನು ತಲೆಯಲ್ಲಿಟ್ಟುಕೊಂಡು ಅದರಂತೆ ನಡೆಯುವವನು. ಇಂತಹವರು ಅತ್ಯುತ್ತಮರು.

ರಾಜ : ಭಲೇ ಕಾಳಿದಾಸ! ಬಹಳ ಚೆನ್ನಾಗಿ ಅರ್ಥಮಾಡಿಸಿದೆ.

ಕಾಳಿದಾಸ : ಈ ಬೊಂಬೆ ತಯಾರಕ ಸಾಮಾನ್ಯ ಶಿಲ್ಪಿಯಲ್ಲ. ಆದ್ದರಿಂದ ಅವನು ಕೇಳಿದ ಹಣ ನೀಡಿ ಸನ್ಮಾನಿಸೋಣ.

ಬೊಂಬೆ ತಯಾರಕ : ಧನ್ಯವಾದ ಪ್ರಭುಗಳೇ! ಮಹಾಕವಿ ಕಾಳಿದಾಸನ ವಿದ್ವತ್ತಿನ ಮುಂದೆ ನಾನು ಸೋತೆ. ನನಗೆ ಹಣಬೇಡ. ತಮ್ಮ ರಾಜ್ಯದಲ್ಲಿ ಮೂರನೆಯ ಬೊಂಬೆಯಂತಹ ಜನಗಳಿರಲಿ ಎಂಬುದೇ ನನ್ನ ಆಸೆ. ನನ್ನ ಪರಿಶ್ರಮ ಇಂದು ಸಾರ್ಥಕವಾಯಿತು. ಇದೇ ನನಗೆ ಪ್ರತಿಫಲ ನಾನಿನ್ನು ಹೊರಡುವೆನು.

**ಪದಗಳ ಅರ್ಥ:**

ಸಾಧಾರಣ – ಸುಮಾರಾದ; ವಿಶಿಷ್ಟ – ವಿಶೇಷವಾದ; ವಿಚಿತ್ರ – ಸಾಮಾನ್ಯವಲ್ಲದ; ವರಹ – (ಹಂದಿಚಿತ್ರವಿರುವ ) ಒಂದು ಚಿನ್ನದ ನಾಣ್ಯ; ಕಾಸು – ತಾಮ್ರದ ಸಣ್ಣ ನಾಣ್ಯ; ಜ್ಞಾನದ ಮಾತು – ವಿವೇಕದ ಮಾತು; ಸೊಗಸು – ಸುಂದರ; ಅತ್ಯುತ್ತಮರು – ಬಹಳ ಬುದ್ಧಿವಂತರು; ಪರಿಶ್ರಮ – ವಿಶೇಷವಾದ ಶ್ರಮ; ಸಾರ್ಥಕ – ಪ್ರಯೋಜನಕರ; ಪ್ರತಿಫಲ – ಮಾಡಿದ ಕೆಲಸಕ್ಕೆ ಸಿಗುವ ಫಲ.



## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ರಾಜನು, ತನ್ನನ್ನು ಹೇಗೆ ಕಾಪಾಡಬೇಕೆಂದು ಬೊಂಬೆ ತಯಾರಕ ಬಯಸಿದನು?

೨. ಬೊಂಬೆಯ ಬೆಲೆಗಿಂತ ಮುಂಚೆ ತಯಾರಕನು ರಾಜನಿಗೆ ತಿಳಿಸಿದ್ದೇನು?

೩. ಮೊದಲ ಬೊಂಬೆಯ ವಿಶೇಷವೇನು?

೪. ಮೂರನೆಯ ಬೊಂಬೆಯಲ್ಲಿ ದಾರ ಏನಾಯಿತು?

೫. ಬೊಂಬೆಗಳ ಬೆಲೆಯನ್ನು ಯಾರು ನಿಗದಿಪಡಿಸಿದರು?

೬. ಪಂಡಿತರು ಬೊಂಬೆಗಳಿಗೆ ಎಷ್ಟು ಬೆಲೆ ಕೊಡಬಹುದೆಂದರು?

೭. ಬೊಂಬೆ ತಯಾರಕನು ಬೊಂಬೆಗಳಿಗೆ ನಿಗದಿ ಮಾಡಿದ ದರವೆಷ್ಟು?

೮. ಬೊಂಬೆಗಳನ್ನು ಯಾವುದರಿಂದ ಮಾಡಲಾಗಿತ್ತು?

೯. ಬೊಂಬೆಗಳ ಬೆಲೆ ಹೆಚ್ಚಾಗಲು ತಯಾರಕನು ನೀಡಿದ ಕಾರಣವೇನು?

೧೦. ಬೊಂಬೆ ತಯಾರಕನ ಆಸೆ ಏನು?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ**

೧. ಬೊಂಬೆಗಳ ಬಗ್ಗೆ ತಯಾರಕನು ರಾಜನಿಗೆ ಏನು ಹೇಳಿದ?

೨. ಕಾಳಿದಾಸನು ಮೂರು ಬೊಂಬೆಗಳಿಗೆ ನೀಡಿದ ವಿಶೇಷ ಅರ್ಥವೇನು?

**ಇ. ಕೆಳಗಿನ ಸಾಲುಗಳನ್ನು ಯಾರು, ಯಾರಿಗೆ ಹೇಳಿದರೆಂದು ಬರೆಯಿರಿ**

೧. 'ಪ್ರಭು, ಈ ಬೆಲೆ ಬಹಳ ಕಡಿಮೆಯಾಯಿತು'

೨. 'ಇಂತಹವರು ಅತ್ಯುತ್ತಮರು'

## – ಪ್ರಾಯೋಗಿಕ ಚಟುವಟಿಕೆ –

**ಅ. ಕೆಳಗೆ ಎರಡು ಗೊಂಬೆಗಳಿವೆ. ಅವುಗಳಿಗೆ ಹೆಸರಿಟ್ಟು ಅವುಗಳ ನಡುವಿನ ಸಂಭಾಷಣೆಯನ್ನು ಕಲ್ಪಿಸಿ ಬರೆಯಿರಿ.**





**ಆ. ಕೆಳಗಿನ ಪದಗಳನ್ನು ಬಿಡಿಸಿ ಗಟ್ಟಿಯಾಗಿ ಹೇಳಿರಿ.**

ತಲೆಯಲ್ಲಿಟ್ಟುಕೊಂಡು, ಅತ್ಯುತ್ತಮ, ಜನಗಳಿರಲಿ, ಬೊಂಬೆಯಂತಹ, ಸಾರ್ಥಕವಾಯಿತು.

**ಇ. ಈ ಪಾಠದ ಪಾತ್ರಗಳನ್ನು ಹಂಚಿಕೊಂಡು ಅಭಿನಯಿಸಿ.**

## – ವ್ಯಾಕರಣಾಭ್ಯಾಸ –

**ಕೆಳಗಿನ ಪದಗಳ ಲಿಂಗ ಬದಲಿಸಿ**

ಕವಿ, ರಾಜ, ಮಗಳು, ಸೇವಕ, ಹುಡುಗ, ಗಂಡುಮಗು, ರಾಜಕುಮಾರ.

| **ಶಕ್ತಿಗಿಂತ ಯುಕ್ತಿ ಮೇಲು** |
|---|



# ೯. ಮಳೆಯ ಹಾಡು (ಪದ್ಯ)

– ಸಂಧ್ಯಾರೆಡ್ಡಿ

**ಆಶಯ:** ಮಳೆ ಎಂದರೆ ಎಲ್ಲರಿಗೂ ಅತಿ ಪ್ರೀತಿ. ಅನೇಕ ಕವಿಗಳು ಮಳೆಯನ್ನು ಕುರಿತು ಹಾಡಿದ್ದಾರೆ. ಅದರ ಅನುಭವ ವಿಶೇಷವಾದುದು. ಮಳೆ ಯಾವಾಗಲೂ ಒಂದೇ ರೀತಿ ಬೀಳುವುದಿಲ್ಲ. ನಿಧಾನವಾಗಿ, ಬಿರುಸಾಗಿ, ಹನಿಹನಿಯಾಗಿ ಬೇರೆ ಬೇರೆ ವಿನ್ಯಾಸಗಳಲ್ಲಿ ಭೂಮಿಗೆ ಬಿದ್ದು ಇಡೀ ಜೀವರಾಶಿಗೆ ಚೈತನ್ಯ ನೀಡುತ್ತದೆ. ಈ ಮಳೆಯನ್ನು ವಿವಿಧ ರೂಪಗಳಲ್ಲಿ ಕಂಡ ಅನುಭವವನ್ನು ಈ ಕವನದಲ್ಲಿ ವರ್ಣಿಸಲಾಗಿದೆ.

ಹನಿಮಳೆ ಬಿರುಮಳೆ ಸುರಿದಾವ
ಕೆರೆಹೊಳೆ ನದಿಜಲ ತುಂಬ್ಯಾವ
ಮರಗಿಡಬಳ್ಳಿ ನಲಿದಾವ
ಭೂಮಿಗೆ ಹೊಸಕಳೆ ತಂದಾವ.

ಬೆಟ್ಟಗುಡ್ಡಗಳು ಬಯಲುಕಾಡುಗಳು
ಸುರಿನೀರ್ಮಳೆಯಲಿ ಮಿಂದಾವ
ಹಕ್ಕಿಪಕ್ಕಿಗಳು ಪೈರು ಪಚ್ಚೆಗಳು
ಹರುಷದಿ ಕುಣಿಕುಣಿ ಕುಣಿದಾವ.

ಜಡಿಮಳೆ ಬಿಸಿಲ್ಮಳೆ ಹೂಮಳೆ ಬಿರುಮಳೆ
ವಿಧವಿಧ ರೂಪವ ತಳೆದಾವ
ಗುಡುಗುಡು ಗುಡುಗುತ ರಪರಪ ಸಿಡಿಯುತ
ಭೂಮಿಗೆ ಮಳೆಹನಿ ಇಳಿದಾವ.

ನದಿಗಳು ಸೊಕ್ಕಿ ಕೆರೆಗಳು ಉಕ್ಕಿ
ಕಂಗಾಲಾದವು ಚಿಲಿಪಿಲಿ ಹಕ್ಕಿ
ಗುಡುಗುತ ಸಿಡಿಯುತ ಉಕ್ಕುತ ಸೊಕ್ಕುತ
ಭೂಮಿಗೆ ಮಳೆಹನಿ ಇಳಿದಾವ.



## ಕವಯಿತ್ರಿಯ ಪರಿಚಯ:



ಸಂಧ್ಯಾರೆಡ್ಡಿ ಅವರು ೨೨–೦೬–೧೯೫೩ರಂದು ಚಿತ್ರದುರ್ಗದಲ್ಲಿ ಜನಿಸಿದರು. ಇವರು ಎನ್ ಜಿ ಇ ಎಫ್ ಸಂಸ್ಥೆಯಲ್ಲಿ ಉಪನಿರ್ದೇಶಕರಾಗಿ ಹಾಗೂ ಹಲವಾರು ಶಿಕ್ಷಣ ಸಂಸ್ಥೆಗಳಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಉತ್ತಮ ಸಂಘಟನಾಕಾರರು ಮತ್ತು ಚಿಂತನಶೀಲರು **ಮೂವತ್ತೈದರ ಹೊಸ್ತಿಲು, ಈ ಪ್ರೀತಿಯೊಳಗೆ, ಬೇರೊಂದು ದಾರಿ** ಮೊದಲಾದವು ಇವರ ಕೃತಿಗಳು. ಇವರಿಗೆ ಮಲ್ಲಿಕಾ ಪ್ರಶಸ್ತಿ, ಕರ್ನಾಟಕ ಜಾನಪದ ಅಕಾಡೆಮಿ ಪ್ರಶಸ್ತಿ ಮೊದಲಾದ ಪುರಸ್ಕಾರಗಳು ದೊರೆತಿವೆ.

**ಪದಗಳ ಅರ್ಥ:**

ಹನಿಮಳೆ – ಹನಿ ಹನಿಯಾಗಿ ಬೀಳುವ ಮಳೆ; ಬಿರುಮಳೆ – ಬಿರುಸಾಗಿ ಬೀಳುವ ಮಳೆ; ಸುರಿದಾವ – ಸುರಿದಿವೆ; ತುಂಬ್ಯಾವ – ತುಂಬಿವೆ; ನೀರ್ಮಳೆ – ನೀರಿನ ಮಳೆ; ಮಿಂದಾವ – ಒದ್ದೆಯಾಗಿವೆ; ಕುಣಿದಾವ – ಕುಣಿದಿವೆ; ಜಡಿಮಳೆ – ಒಂದೇ ಸಮನೆ ಬೀಳುವ ಮಳೆ; ಬಿಸಿಲ್ಮಳೆ – ಬಿಸಿಲಲ್ಲಿ ಬೀಳುವ ಮಳೆ; ಹೂಮಳೆ – ಹೂ ಬಿದ್ದಂತೆ ಭಾಸವಾಗುವ ಮಳೆ; ಉಕ್ಕಿ – ಹೆಚ್ಚಾಗಿ; ಕಂಗಾಲು – ಏನೂ ಮಾಡಲು ತಿಳಿಯದಂತಾಗು; ಇಳಿದಾವ – ಇಳಿದಿವೆ.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗಿನ ಪಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ಮಳೆಯು ಭೂಮಿಗೆ ಏನನ್ನು ತಂದಿದೆ?

೨. ಸುರಿಯುವ ಮಳೆಯಲ್ಲಿ ಮಿಂದಿರುವುದು ಯಾವುದು?

೩. ಹರುಷದಿಂದ ಹಕ್ಕಿಗಳು ಏನು ಮಾಡಿವೆ?

೪. ಹಕ್ಕಿಗಳು ಕಂಗಾಲಾದುದು ಏಕೆ?

೫. ಮಳೆ ಭೂಮಿಗೆ ಹೇಗೆ ಇಳಿದಿದೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ಸುರಿಯುವ ಮಳೆಯಿಂದ ಆಗಿರುವುದೇನು?

೨. ಮಳೆಯ ವಿವಿಧ ರೂಪಗಳು ಯಾವುವು?

**ಇ. ಈ ಪದ್ಯದಲ್ಲಿ ಬಂದಿರುವ ಪ್ರಾಸಪದಗಳನ್ನು ಗುರುತಿಸಿ**

***ಉದಾ:*** ಸುರಿದಾವ–ತುಂಬ್ಯಾವ



## – ಪ್ರಾಯೋಗಿಕ ಚಟುವಟಿಕೆ –

- ಹಕ್ಕಿ–ಪಕ್ಕಿ, ಪೈರು–ಪಚ್ಚೆ ಮುಂತಾದ ಜೊತೆಜೊತೆಯಾಗಿ ಬರುವ ಪದಗಳನ್ನು ಜೋಡಿ ಪದಗಳು ಎನ್ನುತ್ತೇವೆ.

**ಅ. ಈ ಪದ್ಯದಲ್ಲಿ ಬಂದಿರುವ ಜೋಡಿ ಪದಗಳನ್ನು ಪಟ್ಟಿ ಮಾಡಿರಿ.**

**ಆ. ಈ ಕೆಳಗಿನವುಗಳಲ್ಲಿ ಜೋಡಿ ಪದಗಳನ್ನು ಗುರುತಿಸಿರಿ.**

ಮನೆ–ಮಠ, ಕಳೆ–ಗಿಳೆ, ಅಣ್ಣ–ತಂಗಿ, ಕೆರೆ–ಕಟ್ಟೆ, ಗಿಡ–ಮರ

**ಮಳೆಯಿಂದಲೇ ಇಳೆ_ಇಳೆಯಿಂದಲೇ ಬೆಳೆ**



# ೧೦. ಮಾಸ್ತಿಯವರ ಮಾತೃಪ್ರೇಮ (ಗದ್ಯ)

– ಬೆಳಗೆರೆ ಕೃಷ್ಣಶಾಸ್ತ್ರಿ

**ಆಶಯ:** ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರನ್ನು ಕುರಿತಂತೆ ಗೌರವದ ಭಾವನೆ ಇದೆ. ಅದರಲ್ಲೂ ತಾಯಿಯನ್ನು ಕುರಿತಂತೆ ಅತಿ ಹೆಚ್ಚಿನ ಪ್ರೀತಿ ಆದರಗಳಿವೆ. ಇದಕ್ಕೆ ಕನ್ನಡದ ಹಿರಿಯ ಚೇತನ ಮಾಸ್ತಿಯವರದು ಒಂದು ಆದರ್ಶ. ಅವರಿಗೆ ಸ್ತ್ರೀಯರ ಬಗ್ಗೆ, ವಿಶೇಷವಾಗಿ, ಅವರ ತಾಯಿಯ ಬಗ್ಗೆ ಇದ್ದ ಗೌರವ ವಿಶೇಷವಾದುದು. ಸ್ತ್ರೀಯರ ಬಗೆಗಿನ ಈ ಗೌರವಾದರಗಳನ್ನು ಅವರು ಸಾಕ್ಷಾತ್ಕರಿಸಿಕೊಂಡಿದ್ದವರು. ಮಾಸ್ತಿಯವರಿಗೆ ಸ್ತ್ರೀಯರ ಬಗೆಗೆ ಇದ್ದ ಗೌರವವನ್ನು ಮನಗಾಣಿಸುವುದರ ಜೊತೆಗೆ ಸ್ತ್ರೀಯರನ್ನು ಜನರು ಹೇಗೆ ಕಾಣಬೇಕು ಎಂಬ ಅವರ ಬಯಕೆಯನ್ನೂ ಲೇಖಕರಾದ ಬೆಳಗೆರೆ ಕೃಷ್ಣಶಾಸ್ತ್ರಿಗಳು ಈ ಗದ್ಯಭಾಗದಲ್ಲಿ ನಿರೂಪಿಸಿದ್ದಾರೆ.

೧೯೭೫ನೆಯ ಇಸವಿ. ಅಂತರರಾಷ್ಟ್ರೀಯ ಮಹಿಳಾ ವರ್ಷ. ಒಂದು ಮಧ್ಯಾಹ್ನ. ಪೂಜ್ಯ ಮಾಸ್ತಿಯವರನ್ನು ಅವರ ನಿವಾಸದಲ್ಲಿ ಕಂಡೆ. ಕುಶಲ ಪ್ರಶ್ನೆಗಳಾಗುವಷ್ಟರಲ್ಲೇ ಕೆಲವು ಮಹಿಳೆಯರು ಮಾಸ್ತಿಯವರನ್ನು ಕಾಣಲು ಬಂದರು. ಮಾಸ್ತಿ ಎಂದಿನಂತೆ ಕೈ ಜೋಡಿಸಿ 'ಬನ್ನಿ ಅಮ್ಮ ಬನ್ನಿ ತಾಯಿ' ಎಂದು ಅವರನ್ನೆಲ್ಲಾ ಬರಮಾಡಿಕೊಂಡರು. 'ತಾವೆಲ್ಲ ಬಂದ ಕಾರಣ ಏನೆಂದು ಕೇಳಬಹುದೇ? ಎಂದರು ಮಾಸ್ತಿ ಹಸನ್ಮುಖರಾಗಿ.

ಅವರೆಲ್ಲ ಯಾವುದೋ ಮಹಿಳಾ ಸಂಘದವರೆಂದು ತಿಳಿಸಿ, 'ಇದು ಮಹಿಳಾ ವರ್ಷ ಅಲ್ಲವೇ. ಆದ್ದರಿಂದ ಮಹಿಳೆಯರ ಬಗೆಗೆ ತಮ್ಮ ಅನುಭವ, ಅನಿಸಿಕೆ, ಸಲಹೆ ಇತ್ಯಾದಿಗಳನ್ನು ತಮ್ಮಿಂದಲೇ ತಿಳಿಯಬೇಕೆಂದು ಬಂದೆವು' ಎಂದರು ಒಬ್ಬ ಹಿರಿಯರು. ಮಾಸ್ತಿ ಅದಕ್ಕೆ:

'ಬಹಳ ಸಂತೋಷ, ತಾವು ನಮ್ಮ ಮನೆಗೆ ಬಂದು ಈ ವಿಚಾರವಾಗಿ ಕೇಳುತ್ತಿರುವುದು ತುಂಬಾ ಸಂತೋಷದ ಮಾತು. ನಮ್ಮಲ್ಲಿ ಹೆಣ್ಣನ್ನು ಆದಿಶಕ್ತಿ, ಲಕ್ಷ್ಮೀ, ಪಾರ್ವತಿ, ಸರಸ್ವತಿ, ಭಾಗೀರಥೀ, ಗೀರ್ವಾಣಿ ಎಂದೆಲ್ಲ ಕರೆದಿದ್ದಾರೆ. ಬ್ರಹ್ಮ, ವಿಷ್ಣು, ಮಹೇಶ್ವರ ಮುಂತಾದ ಗಂಡುದೇವರುಗಳನ್ನು ಹೆಸರಿಸುವಾಗ ಪಾರ್ವತಿ ಪರಮೇಶ್ವರ, ಲಕ್ಷ್ಮೀನಾರಾಯಣ, ವಾಗ್ಪತಿ ಎಂದು ಹೆಣ್ಣಿನ ಹೆಸರನ್ನು ಮುಂದುಮಾಡಿ ಕರೆಯುವಲ್ಲಿ ಏನೋ ವಿಶೇಷವಿದೆ. ಜಗತ್ತಿನಲ್ಲಿ ಗಂಡು ಎಷ್ಟು ಮುಖ್ಯವೋ ಹೆಣ್ಣೂ ಅಷ್ಟೇ ಮುಖ್ಯ ಎಂದು ವಿವರಿಸಿದರು.

ಆಗ ಹದಿವಯಸ್ಸಿನ ಒಬ್ಬಾಕೆ 'ನಾನೊಂದು ಪ್ರಶ್ನೆ ಕೇಳಲೇ ಸಾರ್' ಎಂದಳು.

'ಕೇಳಿ, ಕೇಳಿ, ಏನು ಬೇಕಾದರೂ ಕೇಳಿ ಸಂಕೋಚವೇಕೆ' ಎಂದರು ಮಾಸ್ತಿ ನಗುತ್ತ.

'ತಾವು ವಯಸ್ಸಿನಲ್ಲಿದ್ದಾಗ ತಮ್ಮ ಹೆಂಡತಿಯಲ್ಲದೆ ಬೇರೊಬ್ಬ ಹೆಂಗಸನ್ನು ಪ್ರೀತಿಸಿದ್ದು ಉಂಟೇ ಸಾರ್' ಎಂದು ಕೇಳಿದರು. ಅಲ್ಲಿದ್ದವರಿಗೆಲ್ಲಾ ಸಿಡಿಲೆರಗಿದಂತಾಯಿತು. ಎಲ್ಲರೂ ಆಕೆಯನ್ನು ದುರುಗುಟ್ಟಿಕೊಂಡು ನೋಡಿದರು. ಆದರೆ ಮಾಸ್ತಿ ನಗುನಗುತ್ತಲೇ 'ಹೌದಮ್ಮ, ಹೌದು ತಾಯೀ, ನಿಮ್ಮ ಮಾತು ನಿಜ, ನಾನು ನನ್ನ ಹೆಂಡತಿಯನ್ನಲ್ಲದೆ ಬೇರೆ ಹೆಂಗಸನ್ನು ಪ್ರೀತಿಸಿದ್ದುಂಟು' ಎಂದರು.

ನೆರೆದವರಿಗೆಲ್ಲ ದಿಗ್ಭ್ರಮೆಯಾಯಿತು. ಪ್ರಶ್ನೆ ಕೇಳಿದ ಆಕೆ ಒಂದು ಬಲವಾದ ಕೋಟೆಯನ್ನೇ ಗೆದ್ದಂತೆ ಗತ್ತಿನಿಂದ ಅಲ್ಲಿದ್ದವರನ್ನೆಲ್ಲಾ ತಲೆ ಎತ್ತಿ ನೋಡಿದರು.





ಮಾಸ್ತಿ ಮುಂದುವರೆದು 'ಹೇಳಬೇಕಾ? ನಾನು ಗಾಢವಾಗಿ ಪ್ರೀತಿಸಿದ ಆ ಹೆಣ್ಣು ಯಾರೆಂದು ತಿಳಿಯಬೇಕೆನ್ನುವಿರಾ? ಎಂದರು. ಆಕೆಗೆ ಇಮ್ಮಡಿ ಹಿಗ್ಗಾಯಿತು.

ಮಾಸ್ತಿ ಹಸನ್ಮುಖಿಯಾಗಿಯೇ ಮಾತನಾಡಿದರು. 'ಕೇಳಿ, ನನ್ನ ಧರ್ಮಪತ್ನಿಯಲ್ಲದೆ ನಾನು ವಿಶೇಷವಾಗಿ ಪ್ರೀತಿಸಿದ ಆ ಹೆಣ್ಣು ನನ್ನ ತಾಯಿ, ನನ್ನ ಹೆತ್ತವ್ವ, ನನಗೆ ಜನ್ಮವಿತ್ತ ದೇವತೆ' ಎಂದರು.

ಆಕೆಯ ಬಾಯಿಂದ ಬಂತು 'ಅಯ್ಯೋ ಅಷ್ಟೇನೇ' ಎಂಬ ಉದ್ಗಾರ.

ಕೂಡಲೆ ಮಾಸ್ತಿ ಕಣ್ಣರಳಿಸಿ ನುಡಿದರು. 'ಏಕೆ ಅಯ್ಯೋ ಎನ್ನುತ್ತಿರಿ, ನಾನು ನನ್ನ ತಾಯಿಯನ್ನು ವಿಶೇಷವಾಗಿ ಪ್ರೀತಿಸಿದ್ದು ತಪ್ಪೇ' ಎನ್ನುತ್ತ ಅಲ್ಲಿದ್ದವರನ್ನೆಲ್ಲಾ ಒಮ್ಮೆ ದಿಟ್ಟಿಸಿ ಮತ್ತೆ ನುಡಿದರು.

'ಹಾಗಾದರೆ ನೀವು ನಿಮ್ಮ ತಾಯಿಯನ್ನು ಪ್ರೀತಿಸುವುದಿಲ್ಲವೇ? ತಾಯಿ ಇಲ್ಲದೆ ನಾವೇ? ನಮ್ಮನ್ನು ಹೊತ್ತು ಹೆತ್ತು, ಸಾಕಿ, ಸಲಹಿ ದೊಡ್ಡವರನ್ನು ಮಾಡಲಿಲ್ಲವೇ? ನಮಗೆ ಸ್ವಲ್ಪ ಆರೋಗ್ಯ ಕೆಟ್ಟರೂ ನೆಗಡಿ, ಕೆಮ್ಮು, ಜ್ವರ ಬಂದರೂ ನಮ್ಮ ತಾಯಿ ಗಾಬರಿಗೊಳ್ಳಲಿಲ್ಲವೇ? ನಮಗಾಗಿ ಔಷಧಿ ಪಥ್ಯಗಳನ್ನು ತಾನು ಪಾಲಿಸಲಿಲ್ಲವೇ? ಹೊಟ್ಟೆ ಬಟ್ಟೆ ಕಟ್ಟಲಿಲ್ಲವೇ? ನಮ್ಮನ್ನು ಹಾಗೆ ಜೋಪಾನ ಮಾಡದಿದ್ದರೆ ನಾವೆಲ್ಲಿರುತ್ತಿದ್ದೆವು? ಎಂದು ಮಾತು ಮುಂದುವರೆಸಿದರು, 'ನೋಡಿ, ನನ್ನ ತಾಯಿ ಇದ್ದಷ್ಟು ದಿನಗಳು ನಾನು ಬೆಳಿಗ್ಗೆ ಎದ್ದ ಕೂಡಲೆ ಅವರೆಲ್ಲಿದ್ದರೂ ಅಲ್ಲಿಗೆ ಹೋಗಿ ಅವರ ಪಾದ ಮುಟ್ಟಿ ನಮಸ್ಕರಿಸಿದ ನಂತರವೇ ನನ್ನ ದಿನಚರಿ

ಪ್ರಾರಂಭವಾಗುತ್ತಿತ್ತು. ಈಚೆಗೆ ಅವರು ತೀರಿಕೊಂಡ ಮೇಲೆ ಅವರ ಭಾವಚಿತ್ರವನ್ನು ಪಾದಗಳು ಕಾಣುವಂತೆ ದೊಡ್ಡದಾಗಿ ಮಾಡಿಸಿ ಆ ಒಳಬಾಗಿಲ ಮೇಲೆ ಹಾಕಿದ್ದೇನೆ, ನೋಡಿ. ಈಗಲೂ ಪ್ರತಿನಿತ್ಯ ಎದ್ದಕೂಡಲೆ ಆ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದ ಮೇಲೆಯೇ ನನ್ನ ಮುಂದಿನ ಕೆಲಸ. ನಿಮಗದು ಚಿತ್ರದ ಬೊಂಬೆಯಾಗಿ ಕಾಣಿಸಬಹುದು. ಆದರೆ ಅದರಲ್ಲಿ ನಾನು ನನ್ನ ತಾಯಿಯನ್ನು ಕಾಣುತ್ತೇನೆ. ಮಹಿಳಾವರ್ಷ ಆಚರಿಸುತ್ತಿರುವ ನಿಮಗೆಲ್ಲ ಈ ವಿಚಾರದಲ್ಲಿ ಸ್ಪಷ್ಟವಾದ ನಿಶ್ಚಯವಿರಬೇಕು. ಮಹಿಳೆಯರ ಹಿರಿಮೆಯನ್ನು ಮೆರೆಯುವಾಗ ತಾಯಿಯ ಮಹಿಮೆಯನ್ನು ಮರೆಯಬಾರದು'. 'ತಾಯಿಗಿಂತ ದೊಡ್ಡವಸ್ತು ಉಂಟೇ' ಎಂದರು.

**ಲೇಖಕರ ಪರಿಚಯ:**



ಬೆಳಗೆರೆ ಕೃಷ್ಣಶಾಸ್ತ್ರಿಗಳು ೨೨ನೇ ಮೇ ೧೯೧೮ರಲ್ಲಿ ಜನಿಸಿದರು. ಇವರು ವೃತ್ತಿಯಲ್ಲಿ ಉಪಾಧ್ಯಾಯರು. ವಿನೋಬಾಭಾವೆಯೊಂದಿಗೆ ಭೂದಾನ ಚಳುವಳಿಯಲ್ಲಿ ಭಾಗವಹಿಸಿದ್ದರು. **'ತುಂಬಿ'** ಎಂಬುದು ಇವರ ಕಥಾಸಂಕಲನ. **'ಹಳ್ಳಿಮೇಷ್ಟ್ರು'** ಮತ್ತು **'ಹಳ್ಳಿಚಿತ್ರ'** ಇವರು ರಚಿಸಿದ ಕೆಲವು ನಾಟಕಗಳು. **'ಸಾಹಿತಿಗಳ ಸ್ಮೃತಿ'** ಎಂಬ ಇವರ ಕೃತಿಯಿಂದ ಈ ಗದ್ಯಭಾಗವನ್ನು ಆರಿಸಲಾಗಿದೆ.

**ಮಾಸ್ತಿಯವರ ಪರಿಚಯ:**



ಕನ್ನಡದ ಆಸ್ತಿ' ಎಂದು ಪ್ರಸಿದ್ಧರಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಕೋಲಾರ ಜಿಲ್ಲೆಯ ಮಾಸ್ತಿ ಎಂಬ ಊರಿನಲ್ಲಿ ೬. ೦೮. ೧೮೯೦ರಲ್ಲಿ ಜನಿಸಿದರು. ಕನ್ನಡ **ಸಣ್ಣಕತೆಯ** ಆಚಾರ್ಯ ಪುರುಷರು ಎನಿಸಿದ ಇವರು ಕತೆ, ಕಾದಂಬರಿ, ಕಾವ್ಯ ವಿಮರ್ಶೆ ಹೀಗೆ ಹಲವು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅವರಿಗೆ ಜ್ಞಾನಪೀಠ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳು ಸಂದಿವೆ. ಅವರು ೧೯೮೬ರಲ್ಲಿ ನಿಧನರಾದರು.



**ಪದಗಳ ಅರ್ಥ:**

ನಿವಾಸ – ವಾಸಮಾಡುವ ಸ್ಥಳ (ಮನೆ); ಹಸನ್ಮುಖ – ನಗುಮುಖ; ಗೀರ್ವಾಣಿ – ದೇವತೆ; ದಿಗ್ಭ್ರಮೆ – ಆಶ್ಚರ್ಯ; ಗಾಬರಿ – ಹೆದರಿಕೆ; ಗತ್ತು – ಅಹಂಕಾರ; ಜೋಪಾನ – ರಕ್ಷಣೆ; ದಿನಚರಿ – ದಿನದ ಕೆಲಸ; ಗಾಢವಾಗಿ – ಬಹಳವಾಗಿ; ದಿಟ್ಟಿಸು – ನೋಡು; ನಿಶ್ಚಯ – ನಿರ್ಧಾರ.

**ಟಿಪ್ಪಣಿ:**

ವಾಗ್ಪತಿ – ವಾಕ್ ಎಂದರೆ ಮಾತು–ವಿದ್ಯೆ. ವಿದ್ಯೆಗೆ ಅಧಿಪತಿ ಸರಸ್ವತಿ, ಸರಸ್ವತಿಯ ಪತಿ ಬ್ರಹ್ಮ.

ಸಿಡಿಲೆರಗು – ಸಿಡಿಲು ಇದ್ದಕ್ಕಿದ್ದಂತೆ ಹೊಡೆಯುತ್ತದೆ. ಆಗ ಗಾಬರಿಯಾಗುತ್ತದೆ. ಸಿಡಿಲೆರಗು ಎಂದರೆ ಗಾಬರಿಯಾಗು, ಭಯಗೊಳ್ಳು ಎಂದರ್ಥವಾಗುತ್ತದೆ.

## – ಅಭ್ಯಾಸ ಚಟುವಟಿಕೆ –

### ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:

೧. ಯಾವ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾವರ್ಷ ಎಂದು ಆಚರಿಸಲಾಯಿತು?

೨. ಮಾಸ್ತಿಯವರನ್ನು ಲೇಖಕರು ಎಲ್ಲಿ ಭೇಟಿಮಾಡಿದರು?

೩. ಮಾಸ್ತಿಯವರೊಡನೆ ಮಾತನಾಡಲು ಬಂದವರು ಯಾರು?

೪. ಬಂದ ಮಹಿಳೆಯರನ್ನು ಮಾಸ್ತಿಯವರು ಹೇಗೆ ಸ್ವಾಗತಿಸಿದರು?

೫. ಮಹಿಳೆಯರು ಮಾಸ್ತಿಯವರ ಬಳಿಗೆ ಬರಲು ಕಾರಣವೇನು?

೬. ಹೆಣ್ಣನ್ನು ಯಾವ ಯಾವ ಹೆಸರಿನಿಂದ ಕರೆಯಲಾಗಿದೆ?

೭. 'ಅಲ್ಲಿದ್ದವರಿಗೆಲ್ಲಾ ಸಿಡಿಲೆರಗಿದಂತಾಯಿತು'. ಏಕೆ?

೮. ಮಾಸ್ತಿಯವರು ತಮ್ಮ ಹೆಂಡತಿಯನ್ನಲ್ಲದೆ ಪ್ರೀತಿಸುತ್ತಿದ್ದ ಮತ್ತೊಂದು ಹೆಣ್ಣು ಯಾರು?

### ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ

೧. ಮಹಿಳಾ ಸಂಘದವರು ಮಾಸ್ತಿಯವರನ್ನು ಕಾಣಲು ಬಂದುದು ಏಕೆ?

೨. ಹದಿವಯಸ್ಸಿನ ಒಬ್ಬಾಕೆ ಮಾಸ್ತಿಯವರನ್ನು ಕೇಳಿದ ಪ್ರಶ್ನೆ ಏನು? ಅದಕ್ಕೆ ಮಾಸ್ತಿ ಕೊಟ್ಟ ವಿವರಣೆ ಏನು?

೩. ತಾಯಿ ಮಕ್ಕಳನ್ನು ನೋಡಿಕೊಳ್ಳುವುದನ್ನು ಕುರಿತು ಮಾಸ್ತಿಯವರು ಹೇಳಿದುದೇನು?

### ಇ. ಈ ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು?

೧. 'ಬನ್ನಿ ಅಮ್ಮ ಬನ್ನಿ ತಾಯಿ'

೨. 'ತಮ್ಮಿಂದಲೇ ತಿಳಿಯಬೇಕೆಂದು ಬಂದೆವು'

೩. 'ನಾನೊಂದು ಪ್ರಶ್ನೆ ಕೇಳಲೆ ಸಾರ್'

೪. 'ತಾಯಿಗಿಂತ ದೊಡ್ಡ ವಸ್ತು ಉಂಟೇ?'

ಈ. ಈ ಕೆಳಗೆ ಪ್ರತಿ ಹೇಳಿಕೆಯ ಕೆಳಗೆ ನಾಲ್ಕು ಉತ್ತರಗಳನ್ನು ಕೊಡಲಾಗಿದೆ. ಸರಿಯಾದ ಉತ್ತರವನ್ನು ಗುರುತಿಸಿ.

೧. 'ಅಲ್ಲಿದ್ದವರಿಗೆಲ್ಲಾ ಸಿಡಿಲೆರಗಿದಂತಾಯಿತು' ಎಂಬಲ್ಲಿ ಸಿಡಿಲೆರಗಿದಂತಾಯಿತು ಎಂದರೆ –

❑ ಗಾಬರಿಯಾಯಿತು
❑ ಸಿಡಿಲು ಬಿದ್ದ ಹಾಗಾಯಿತು
❑ ಸಿಡಿಮಿಡಿಗೊಳ್ಳುವಂತಾಯಿತು
❑ ಕೋಪಬಂದಿತು

೨. 'ಇಮ್ಮಡಿ' ಎಂಬ ಪದದ ಅರ್ಥ –

❑ ಇಂಪಾದ ನುಡಿ
❑ ಎರಡರಷ್ಟು
❑ ಹಿಂದಿನ ಕಾಲು
❑ ಎರಡು ಕಡೆ

೩. ಕೆಳಗಿನ ಪದಗಳಲ್ಲಿ ಸರಿಯಾದ ರೂಪ –

❑ ಸ್ಥಾನಾಮಾನ
❑ ಸ್ಥಾನಮಾನ
❑ ಸ್ಥಾನಮನ
❑ ಸ್ಥಾನಾಮನ

೪. ಮಾಸ್ತಿಯವರು ಪಡೆದ ಪ್ರಶಸ್ತಿ –

❑ ನೊಬೆಲ್ ಪ್ರಶಸ್ತಿ
❑ ಜ್ಞಾನಪೀಠ ಪ್ರಶಸ್ತಿ
❑ ನೆಹರು ಪ್ರಶಸ್ತಿ
❑ ಪಂಪ ಪ್ರಶಸ್ತಿ

ಉ. ಕೆಳಗೆ ಕೊಟ್ಟಿರುವ ವಾಕ್ಯಗಳ ನಡುವೆ ಪಾಠದಲ್ಲಿ ಬರುವ ವಿಷಯಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ:

೧. 'ಕೇಳಿ ಕೇಳಿ ಏನು ಬೇಕಾದರೂ ಕೇಳಿ ಸಂಕೋಚವೇಕೆ' .......................... 'ಅಲ್ಲಿದ್ದವರಿಗೆಲ್ಲ ಸಿಡೆಲೆರಗಿದಂತಾಯಿತು'

೨. 'ನನ್ನ ದಿನಚರಿ ಪ್ರಾರಂಭವಾಗುತ್ತಿತ್ತು' .......................... 'ನನ್ನ ಮುಂದಿನ ಕೆಲಸ'

## – ಪ್ರಾಯೋಗಿಕ ಚಟುವಟಿಕೆ –

ತಾಯಿಯನ್ನು ಕುರಿತಂತೆ ನಿಮ್ಮ ಅನುಭವಗಳನ್ನು ಗದ್ಯ ಅಥವಾ ಪದ್ಯ ರೂಪದಲ್ಲಿ ಬರೆಯಿರಿ





**ಕೆಳಗೆ ಭೂತ, ವರ್ತಮಾನ ಮತ್ತು ಭವಿಷ್ಯತ್ ಕಾಲಗಳಿಗೆ ಉದಾಹರಣೆಯಾಗುವ ವಾಕ್ಯಗಳಿವೆ. ನೀವೂ ಈ ರೀತಿ ವಿವಿಧ ಕಾಲಗಳನ್ನು ಸೂಚಿಸುವ ವಾಕ್ಯಗಳನ್ನು ರಚಿಸಿರಿ**

೧. ಮಾಸ್ತಿಯವರನ್ನು ಅವರ ನಿವಾಸದಲ್ಲಿ ಕಂಡೆ

೨. ನನ್ನ ದಿನಚರಿ ಪ್ರಾರಂಭವಾಗುತ್ತದೆ

೩. ನನ್ನ ದಿನಚರಿಯನ್ನು ಮುಂದೆ ಬರೆಯುವೆನು

**ತಾಯಿಗಿಂತ ಬಂಧುವಿಲ್ಲ – ಉಪ್ಪಿಗಿಂತ ರುಚಿಯಿಲ್ಲ**



# ೧೧. ತವರು (ಪದ್ಯ)

**– ಜನಪದ ಸಾಹಿತ್ಯ**

**ಆಶಯ :** ತಾಯಿಗಿಂತ ಮಿಗಿಲಾದ ದೇವರಿಲ್ಲ ಎಂಬುದು ಜನಜನಿತವಾದ ಮಾತು. ತಾಯಿತಂದೆಯರು ಅಮೂಲ್ಯ ಆಸ್ತಿ. ಪ್ರಪಂಚದಲ್ಲಿ ಬೇರೇನನ್ನಾದರೂ ಮರಳಿ ಪಡೆಯಬಹುದು. ಆದರೆ ಕಳೆದುಕೊಂಡ ತಂದೆತಾಯಿಯನ್ನು ಪುನಃ ಪಡೆಯಲು ಸಾಧ್ಯವಿಲ್ಲ. ಕಾಶಿಗೆ ಸಮಾನರಾದ ತಾಯಿತಂದೆಯರು ತವರಿಗೆ ಆಸ್ತಿ ಮತ್ತು ಆಗತ್ಯ ಎಂಬುದು ಈ ಜನಪದ ತ್ರಿಪದಿಗಳ ಆಶಯವಾಗಿದೆ.

ಹಲ್ಲು ಸುಲಿಯಲಿ ಬೇಕು ವೀಳ್ಯ ಮೇಯಲಿ ಬೇಕು
ಮಲ್ಲಿಗಿ ಬೇಕು ತುರುಬೀಗೆ । ಹಡದಮ್ಮ
ನೀ ಬೇಕು ನನ್ನ ತವರೀಗೆ. ॥ ೧ ॥

ಆಕಳು ಕರುಬಂದು ಅಂಬಾ ಅಂಬಾ ಎಂದು
ತಮ್ಮವ್ವನ ಮೊಲಿಯ ನಲಿನಲಿದು । ಉಂಬಾಗ
ನಮ್ಮವ್ವನ ಧ್ಯಾನ ನನಗಾಗ. ॥ ೨ ॥



ಅಕ್ಕ ತಂಗೆರ ಹೊರತು ಮತ್ತೊಬ್ಬ ಗೆಳತಿಲ್ಲ
ಮಕ್ಕಳ ಹೊರತು ಬಳಗಿಲ್ಲ। ನನತಾಯೆ
ಕಾಶಿ ನಿನ ಹೊರತು ತವರಿಲ್ಲ. ॥ ೩ ॥

ಬಾಳಿ ತೋಟದಾಗೆ ಬಾಗಿ ನೀರ್ ಹುಯ್ಯೋರೆ
ಚಂದ್ರಮರೆ ಕೇಳಿ ಮೈದುನರೆ। ನಾನೀಗ
ಹೋಗಿಬರುವೆನು ತವರೀಗೆ. ॥ ೪ ॥

## ಕವಿ ಪರಿಚಯ :

ಜನಪದ ಸಾಹಿತ್ಯವು ನಿರ್ದಿಷ್ಟ ವ್ಯಕ್ತಿಯಿಂದ ರಚನೆಯಾದುದಲ್ಲ. ಇದು ಬಹುಜನರಿಂದ ರಚಿತವಾದದು. ತಲೆಮಾರಿನಿಂದ ತಲೆಮಾರಿಗೆ, ಬಾಯಿಂದ ಬಾಯಿಗೆ ಹರಿದು ಬಂದ ಸಾಹಿತ್ಯವಿದು. ಇದು ಸಮೂಹಜೀವನಕ್ಕೆ ಹಿಡಿದ ಕನ್ನಡಿ. ಕಾಲಾನಂತರದಲ್ಲಿ ವಿವಿಧ ಆಸಕ್ತರಿಂದ ಸಂಗ್ರಹಗೊಂಡು ಲಿಖಿತರೂಪದಲ್ಲಿ ಇಂದು ಲಭ್ಯವಿದೆ.

***ಪ್ರಸ್ತುತ "ತವರು" ಎಂಬ ಈ ಜನಪದ ತ್ರಿಪದಿಯನ್ನು ಹಲಸಂಗಿ ಸಹೋದರರು ಸಂಪಾದಿಸಿದ 'ಗರತಿಯ ಹಾಡು' ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ.***

## ಪದಗಳ ಅರ್ಥ:

ಆಕಳು – ಹಸು; ಬಳಗ – ನೆಂಟರಿಷ್ಟರು; ಸುಲಿ – ಉಜ್ಜು /ತಿಕ್ಕು; ಭಾವ – ಅಕ್ಕನ ಗಂಡ; ಹಡೆದಮ್ಮ – ಹೆತ್ತತಾಯಿ; ವೀಳ್ಯ – ವೀಳೆಯದೆಲೆ; ತುರುಬು – ಕೂದಲಿನ ಗಂಟು; ಅವ್ವ – ತಾಯಿ; ಮೈದುನ – ಗಂಡನ ತಮ್ಮ; ಧ್ಯಾನ – ನೆನಪು; ತವರು – ತಾಯಿಯ ಮನೆ.



## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ತುರುಬಿಗೆ ಏನು ಬೇಕು?

೨. ಆಕಳು ಕರು ಯಾವಾಗ ಸಂತಸದಿಂದಿರುತ್ತದೆ?

೩. ಯಾರ ಹೊರತು ತವರಿಲ್ಲ ಎಂದು ಜನಪದರು ಹೇಳುತ್ತಾರೆ?

೪. ಅತ್ತಿಗೆ ತನ್ನ ಮೈದುನರನ್ನು ಏನೆಂದು ಕರೆಯುತ್ತಾಳೆ?

**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ತಾಯಿ ತವರಿಗೆ ಬೇಕು ಎಂಬುದಕ್ಕೆ ನೀಡಿರುವ ಹೋಲಿಕೆಗಳಾವುವು?

೨. ತಾಯಿಯ ಧ್ಯಾನ ಬರುವ ಸಂದರ್ಭಗಳಾವುವು?

೩. ನಾರಿ ತವರಿಗೆ ಹೋಗಿಬರುವೆನೆಂದು ಹೇಗೆ ಹೇಳುತ್ತಾಳೆ?

**ಇ. ತವರು** ಪದ್ಯದಲ್ಲಿ ಬಳಕೆಯಾಗಿರುವ ಪ್ರಾಸಪದಗಳನ್ನು ಗುರುತಿಸಿ.

**ಈ. ಕೆಳಗಿನ ಪದಗಳನ್ನು ಕೂಡಿಸಿ ಬರೆಯಿರಿ:**

ಮಕ್ಕಳು+ಇದ್ದರೆ

ತವರು+ಇಲ್ಲ

ಬಳಗ+ಇಲ್ಲ.

## – ಪ್ರಾಯೋಗಿಕ ಚಟುವಟಿಕೆ –

**ಕೆಳಗಿನ ಜನಪದ ತ್ರಿಪದಿಗಳನ್ನು ಗಟ್ಟಿಯಾಗಿ ಓದಿರಿ.**

**ಕೊಟ್ಟಿರುವ ಚಿತ್ರಗಳೊಂದಿಗೆ ಹೊಂದಿಸಿರಿ**



೧. ಹಾವಿನ ಹೆಡೆ ಚಂದ ಮಾವಿನ ಮಿಡಿ ಚಂದ
ಹಾರಾಡೊ ಗಿಣಿಯು ಬಲುಚಂದ। ಕಂದಯ್ಯ
ನೀ ಚಂದ ನನ್ನ ಮನೆಗೀಗ



೨. ತೊಟ್ಟೀಲ ಹೊತ್ಕೊಂಡು ತೌರ್ ಬಣ್ಣ ಉಟೊಂಡು
ಅಪ್ಪ ಕೊಟ್ಟೆಮ್ಮೆ ಹೊಡ್ಕೊಂಡು। ತಂಗ್ಯಮ್ಮ
ತಿಟ್ ಹತ್ತಿ ತಿರುಗಿ ನೋಡ್ಯಾಳ.



೩. ಇನ್ನೆಲ್ಲಿ ನೋಡಲಿಂಥ ಬಳೆಯ ಬಳೆಗಾರ ಶೆಟ್ಟಿ
ನಮ್ಮ ನಾಡಲ್ಲಿ ಬಳೆಯಿಲ್ಲ।
ನಮ್ಮ ನಾಡಲ್ಲಿ ಬಳೆಯಿಲ್ಲ ಬಳೆಗಾರ
ಕೊಂಡ್ ಹೋಗೋ ನನ್ನ ತವರೀಗೆ.



೪. ಜನಕರಾಯನ ಮಗಳು ಬನಕೆ ತೊಟ್ಟಿಲ ಕಟ್ಟಿ
ಲವಕುಶರನ್ನು ತೂಗ್ಯಾಳ। ಸೀತಾದೇವಿ
ನಗುತ ವನವಾಸ ಕಳೆದಾಳ.


ತಾಯಿದ್ರೆ ತವರೆಚ್ಚು–ತಂದಿದ್ರೆ ಬಳಗೆಚ್ಚು

✤ ✤ ✤ ✤ ✤

# ೧೨. ಕರ್ಚೀಫ್ ಮಹಿಮೆ (ಗದ್ಯ)

– ಜಯಪ್ರಕಾಶ ಅಬ್ಬಿಗೇರಿ

**ಆಶಯ:** ಅನೇಕ ಉದ್ದೇಶಗಳಿಗಾಗಿ ನಾವು ಓದುತ್ತೇವೆ. ಓದುವುದರ ಮೂಲಕ ಮನಸ್ಸು ಹಗುರವಾಗಬೇಕು, ಮನಸ್ಸಿಗೆ ಆನಂದವಾಗಬೇಕು ಎಂಬ ಅಪೇಕ್ಷೆಗಳೂ ಇರುತ್ತವೆ. ಈ ಉದ್ದೇಶದಿಂದಲೇ ಲಲಿತ ಪ್ರಬಂಧಗಳು ಹುಟ್ಟಿಕೊಂಡವು. ಇವುಗಳಲ್ಲಿ ತೀರಾ ಸಾಮಾನ್ಯವಾದ ವಿಷಯಗಳು ಲೇಖಕರ ಸೃಜನಶೀಲ ಚಿಂತನೆಯಲ್ಲಿ ತೊಯ್ದು ವಿಶೇಷವಾಗಿ ಮನಸ್ಸಿಗೆ ಮುದಕೊಡುವ ರೀತಿಯಲ್ಲಿ ನಿರೂಪಿತವಾಗುತ್ತವೆ. ಕರ್ಚೀಫ್ ಎಂಬ ಒಂದು ಸಾಧಾರಣ ವಸ್ತುವಿನ ಬಹುಮುಖ ವಿವರಣೆಯನ್ನು ಈ ಗದ್ಯಭಾಗ ವಿಶಿಷ್ಟ ರೀತಿಯಲ್ಲಿ ಮುಂದಿಡುತ್ತದೆ.

ಕರ್ಚೀಫ್ – ಇದರ ಬಗೆಗೆ ಬರೆಯಬೇಕೆಂಬ ಹಂಬಲ ಉಂಟಾದದ್ದು ಮೊನ್ನೆ ಬಸ್ಸಿನಲ್ಲಿ ನಾನು ಇದನ್ನು ಕಳೆದುಕೊಂಡ ಮೇಲೆ. ಸಾಮಾನ್ಯವಾಗಿ ನಾವು ಕಳೆದುಕೊಳ್ಳಬಹುದಾದ ವಸ್ತುಗಳಾದ ಚಪ್ಪಲಿ, ಚಾಳೀಸು ಇವುಗಳೊಂದಿಗೆ ಕರ್ಚೀಫೂ ಒಂದು. ಇದರ ಹೆಸರೇ ಸೂಚಿಸುವಂತೆ ಅತೀ ಚೀಪ್ ಬೆಲೆಯಲ್ಲಿ ಕೈಗೆಟಕುವ ಬಟ್ಟೆಯ ತುಂಡು ಇದು. ಇದೇ ತುಂಡು ತನ್ನ ಅಂಚನ್ನು ಹೊಲಿಸಿಕೊಂಡು 'ಕರ್ಚೀಫ್' ಎಂಬ ದೊಡ್ಡ ಹೆಸರು ಪಡೆದಿದೆ.

ಈ ಕರ್ಚೀಫಿಗೆ ಜಾತಿ, ಪಕ್ಷ, ಪಂಗಡ, ಭಾಷೆಯ ಭೇದಗಳಿಲ್ಲದಿದ್ದರೂ ಸಹ ಲಿಂಗಭೇದವಿದೆ ಎಂಬುದನ್ನು ಒಪ್ಪಲೇಬೇಕು. ಇತ್ತೀಚೆಗೆ ನಮ್ಮ ಕಾಲೇಜು ಕನ್ಯೆಯರು ಇದಕ್ಕೆ 'ಹ್ಯಾಂಡ್ ಕೀ' ಎಂಬ ವಿಶೇಷ ನಾಮಾಂಕಿತವನ್ನಿಟ್ಟುಕೊಂಡಿದ್ದಾರೆ. ಇವರ ಹ್ಯಾಂಡ್ ಕೀಯ ಅಳತೆಯನ್ನು ನೋಡಿಯೇ ಬೆರಗುಗೊಳ್ಳಬೇಕು. ಸರಿಯಾಗಿ ಮೂಗು ಮುಚ್ಚಿಕೊಳ್ಳಲೂ ಸಹಿತ ಆಗದ ಈ ಹ್ಯಾಂಡ್‌ಕೀಯಿಂದ ಅವರು ಅದೇನು ಬೆರಗುಗೊಳ್ಳುತ್ತಾರೋ ದೇವರೇ ಬಲ್ಲ. ರಂಗುರಂಗಿನ ಬಣ್ಣಗಳಲ್ಲಿ ವಿವಿಧ ವಿನ್ಯಾಸಗಳಲ್ಲಿ ಹೆಣಿಕೆ ಹಾಕಿದ ಈ ಪುಟ್ಟ ಕರ್ಚೀಫ್‌ಗಳು ಸೆಂಟ್ ಸಿಂಪಡಿಸಿಕೊಂಡ ಲಲನಾಮಣಿಗಳ ಜಂಭದ ಚೀಲದ ಮುಂಬದಿಯ ಪಾಕೆಟ್‌ನಲ್ಲಿ ಭದ್ರವಾಗಿ ಬಂಧಿತವಾಗಿರುತ್ತದೆ.

ಸಣ್ಣವರಿದ್ದಾಗ ಮೂಗಿಗೂ ಹಾಗೂ ಅಂಗಿಯ ತೋಳಿಗೂ ಅವಿನಾಭಾವ ಸಂಬಂಧವಿತ್ತು. ಮೂಗಿನಲ್ಲಿ ಸಿಂಬಳ ಕಾಣಿಸಿಕೊಂಡರೆ ಎಡ ಬಲತೋಳು ಆಟೋಮೆಟಿಕ್ ಆಗಿ ಅದನ್ನು ಒರೆಸುವಂತಹ ಪ್ರಯತ್ನ ಮಾಡೇ ಮಾಡುತ್ತಿತ್ತು. ಹೀಗಾಗಿ ಅಂಗಿಯನ್ನು ತೊಳೆದು ಇಸ್ತ್ರಿಮಾಡಿದ ನಂತರ ಅದರ ತೋಳುಗಳು ಮಾತ್ರ ಸ್ಟಾರ್ಚ್ ಹಾಕಿದಂತೆ ಖಡಕ್ ಆಗಿ ಕಂಗೊಳಿಸುತ್ತಿದ್ದವು. ಮಕ್ಕಳ ಅಂಗಿಯ ತೋಳುಗಳನ್ನು ತೊಳೆದು ತೊಳೆದು ಸಾಕಾಗಿ ತಾಯಂದಿರು ಈ ತೊಂದರೆ ತಪ್ಪಿಸಲು ಒಂದು ಅರಿವೆಗೆ ದಾರಕಟ್ಟಿ ಅದನ್ನು ಮಕ್ಕಳ ಕೊರಳಿಗೆ ಕಟ್ಟಿ ಬಿಡುತ್ತಿದ್ದರು.

ಹೀಗಾಗಿ ಮಕ್ಕಳಿಂದ ಕರ್ಚೀಫ್ ಕಳೆಯುವ ಹಾಗೂ ಅವರ ಅಂಗಿಯ ತೋಳುಗಳನ್ನು ತೊಳೆಯುವ ತೊಂದರೆಯೂ ಸಹಿತ ತಪ್ಪುತ್ತಿತ್ತು. ಆದರೆ ಈಗ ಅದೆಲ್ಲ ಕಡಿಮೆಯಾಗಿ ಮೂಗಿನ ಚಾರ್ಜು ಅಂಗಿಯ ತೋಳಿನ ಬದಲಿಗೆ ಕರ್ಚೀಫ್ ಬಂದಿದೆ. ಹೀಗಾಗಿ ಇದು ಮೂಗಿನ ಸಂಪೂರ್ಣ ಜವಾಬ್ದಾರಿಯನ್ನು ತೆಗೆದುಕೊಂಡು ಮಾನ ಕಾಪಾಡುತ್ತದೆ. ನೆಗಡಿಯಾದಾಗ ಆಗಾಗ ಸೀನಲೆಂದು ಹೊರಗೆ ಹೋಗುವ

ತೊಂದರೆಯನ್ನು ಸಹ ಇದು ತಪ್ಪಿಸುತ್ತದೆ. ಕುಳಿತಲ್ಲೇ ಮೂಗನ್ನು ಕರ್ಚೀಫ್‌ನಿಂದ ಮುಚ್ಚಿ 'ಸೊಡ್ರಕ್' ಎಂದು ಸೀನಿ ಮತ್ತೆ ಅದನ್ನು ಮಡಚಿ ಕಿಸೆಯಲ್ಲೇ ಇಟ್ಟುಕೊಳ್ಳುವ ಅನುಕೂಲತೆಯನ್ನೂ ಸಹ ಈ ಕರ್ಚೀಫ್ ಮಾಡಿಕೊಡುತ್ತದೆ. ಹಾಗೆಂದು ಇದನ್ನು ತುಚ್ಛವಾಗಿಯೂ ಸಹ ಕಾಣುವಂತಿಲ್ಲ. ಬೇಸಿಗೆಯ ಬೇಗೆಯಲ್ಲಿ ಬೆಂದು ಬೆವರಿದಾಗ ಮುಖವನ್ನು ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ಹೊಲಿಸಿದ ಕಿಮ್ಮತ್ತಿನ ಡ್ರೆಸ್‌ಗಳಿಂದ ಒರೆಸಿಕೊಳ್ಳಲಾದೀತೇ? ಆಗ ಕಿಸೆಯಲ್ಲಿನ ಕರ್ಚೀಫ್ ನಮಗೆ ಗತಿ. ಕಚೇರಿಯಲ್ಲಿನ ಜವಾನ ಕುರ್ಚಿ ಟೇಬಲ್‌ಗಳ ಮೇಲಿನ ಧೂಳು ಹೊಡೆಯಲು ಮರೆತಿದ್ದರೆ ಅದನ್ನು ಸ್ವಚ್ಛಮಾಡಲು ನಮಗೆ ಕರ್ಚೀಫ್ ಬೇಕು. ತಲೆ ನೋಯತೊಡಗಿದರೆ ಹಣೆಗೆ ಕರ್ಚೀಫ್ ಕಟ್ಟಿಕೊಂಡು ತಾತ್ಕಾಲಿಕ ಉಪಶಮನ ಪಡೆಯಲು ಸಾಧ್ಯವಾಗುತ್ತದೆ. ಪೇಟೆಗೆ ಚೀಲ ಮರೆತು ಹೋದರೆ ಕಾಯಿಪಲ್ಯೆ ಅಥವಾ ಹಣ್ಣು ತರಲು ಬಹು ಉಪಯೋಗಿಯಾದ ಕರ್ಚೀಫ್ ಕೈಗೆ ಬರುತ್ತದೆ.




ಪ್ರಯಾಣದ ಸಮಯದಲ್ಲಂತೂ ಸೀಟು ಹಿಡಿಯುವ ಮೊದಲ ಅಸ್ತ್ರವೇ ಕರ್ಚೀಫ್. ಕಿಟಕಿಯಿಂದ ಇದನ್ನು ತೂರಿದ ತಕ್ಷಣ ಇದಕ್ಕೆ ಮರುಳಾಗಿ ಇಳಿಯುತ್ತಿರುವ ಪ್ರಯಾಣಿಕರು ಇದನ್ನು ತಮ್ಮ ಕಿಸೆಗೆ ಸೇರಿಸಿಕೊಂಡು ಸುಮ್ಮನೆ ಹೋಗುವವರೇ ಹೆಚ್ಚಾಗಿರುವುದರಿಂದ ಸೀಟು ಹಿಡಿಯಲು ಸಹಿತ ಕರ್ಚೀಪು ಕೊಡಲು ಹಿಂಜರಿಯುವ ಪ್ರಸಂಗ ಬಂದಿದೆ.

ಒಂದು ಟಾವೆಲ್‌ನಲ್ಲಿ ಸರಿಯಾಗಿ ಎಂಟು ತುಂಡುಗಳನ್ನು ಮಾಡಿದಾಗ ಅದರಲ್ಲಿನ ಒಂದು ತುಂಡುಭಾಗದ ಅಳತೆಯ ಈ ಕರ್ಚೀಪು ಟಾವೆಲ್‌ಗಿಂತಲೂ ಹೆಚ್ಚು ಅನುಕೂಲಕರ. ಎಲ್ಲ ಕೆಲಸ ಮುಗಿಸಿ ಮತ್ತೆ ಕಿಸೆ ಸೇರುವ ಇದು ಟಾವಲ್ಲನ್ನು ಕಂಡು, ಮುಖ ಒರೆಸುವ ವಸ್ತುವಾದೆ, ಸೀಟು ಹಿಡಿಯಲು

ಅಸ್ತ್ರವಾದೆ, ಧೂಳು ಝಾಡಿಸುವ ಅರಿವೆಯೂ ಆದೆ, ಕಾಯಿಪಲ್ಯೆಗೆ ಚೀಲವಾದೆ, ಸಿಂಬಳಬುರುಕರ ಸಾಧನವೂ ಆದೆ, ಹುಡುಗಿಯರ ಕೈಯಲ್ಲಿನ ಹ್ಯಾಂಡ್ ಕೀ ಆದೆ, ನೀನಾರಿಗಾದೆಯೋ ಎಲೆ ಟವಲ್ಲೇ? ಎಂದು ಅಣಕಿಸುತ್ತದೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎನ್ನುವಂತೆ ಬಹು ಉಪಯೋಗಿ ಕರ್ಚೀಫಿನ ಮಹಿಮೆಯನ್ನು ಮರೆಯುವಂತಿಲ್ಲ.

## ಲೇಖಕರ ಪರಿಚಯ :



ಜಯಪ್ರಕಾಶ ಅಬ್ಬಿಗೇರಿ ಅವರ ಪೂರ್ಣ ಹೆಸರು ಜಯಪ್ರಕಾಶ ಕಳಕಪ್ಪ ಅಬ್ಬಿಗೇರಿ. ಇವರು ೧೯೬೭ರಲ್ಲಿ ಗದಗದಲ್ಲಿ ಜನಿಸಿದರು. ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನಲ್ಲಿ ಸೇವೆ ಸಲ್ಲಿಸುತ್ತಿರುವ ಇವರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಶ್ರೀಮತಿಯ ಹನಿಮೂನ್, ಮಹಡಿಯ ಮೇಲೊಂದು ಮನೆಯ ಮಾಡಿ, ಕುಂಬಾರ ಶಿವಲಿಂಗಪ್ಪನವರು, ಸ್ವಾತಂತ್ರ್ಯಯೋಧ ಶತಾಯುಷಿ ಶ್ರೀ ತಿಮ್ಮರೆಡ್ಡಿಯವರು ಮುಂತಾದುವು ಇವರ ಕೃತಿಗಳು.

*ಈ ಪಾಠವನ್ನು ಇವರ **"ಮಹಡಿಯ ಮೇಲೊಂದು ಮನೆಯ ಮಾಡಿ"** ಕೃತಿಯಿಂದ ಆರಿಸಿಕೊಳ್ಳಲಾಗಿದೆ.*

## ಪದಗಳ ಅರ್ಥ :

ಹಂಬಲ – ಆಸೆ; ಅಂಚು – ತುದಿ; ಚಾಳೀಸು – ಕನ್ನಡಕ; ಕೈಗೆಟಕುವ – ಕೊಳ್ಳಲು ಸಾಧ್ಯವಾಗುವ; ಅಂಚು – ಬಟ್ಟೆಯ ತುದಿ; ಲಿಂಗಭೇದ – ಗಂಡು ಹೆಣ್ಣು ಎಂಬ ಭೇದ; ಬೆರಗು – ಆಶ್ಚರ್ಯ; ಅರಿವೆ – ಬಟ್ಟೆ; ರಂಗು – ಬಣ್ಣ; ಚೀಪ್ – ಕಡಿಮೆ ಬೆಲೆಯ; ಲಲನಾಮಣಿ – ತರುಣಿ; ನಾಮಾಂಕಿತ – ಹೆಸರು; ಅವಿನಾಭಾವ – ಒಂದಕ್ಕೊಂದು ಬಿಡದ; ತುಚ್ಛ – ಕೀಳು; ಹಾರೈಸು – ಆಶಿಸು; ಟೊಪ್ಪಿಗೆ – ಟೋಪಿ; ಸ್ಟಾರ್ಚ್ – ಗಂಜಿ



## – ಅಭ್ಯಾಸ ಚಟುವಟಿಕೆ –

### ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:

೧. ಕರ್ಚೀಫ್‌ಗೆ ಲಿಂಗಭೇದವಿದೆ ಎಂದು ಹೇಳಲು ಕಾರಣವೇನು?

೨. ಮಕ್ಕಳ ಅಂಗಿ ಕೊಳೆಯಾಗದಿರಲು ತಾಯಂದಿರು ಮಾಡುವುದೇನು?

೩. ಬೇಸಿಗೆಯಲ್ಲಿ ಕರ್ಚೀಫ್ ಹೇಗೆ ಉಪಯೋಗಕ್ಕೆ ಬರುತ್ತದೆ?

೪. ಕಛೇರಿಯಲ್ಲಿ ಕರ್ಚೀಫ್ ಹೇಗೆ ಸಹಕಾರಿ?

೫. ತಲೆ ನೋವು ಬಂದಾಗ ಕರ್ಚೀಫ್‌ನ್ನು ಹೇಗೆ ಉಪಯೋಗಿಸುತ್ತೇವೆ?

೬. ಪೇಟೆಗೆ ಹೋದಾಗ ಕರ್ಚೀಫನ್ನು ಬಳಸುವುದೇಕೆ?

೭. ಪ್ರಯಾಣದ ಸಮಯದಲ್ಲಿ ಜನ ಕರ್ಚೀಫನ್ನು ಹೇಗೆ ಬಳಸುತ್ತಾರೆ?

೮. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಮಾತನ್ನು ಲೇಖಕರು ಯಾವುದರ ಕುರಿತು ಹೇಳಿದ್ದಾರೆ?

**ಆ. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಡಲಾಗಿದೆ. ಅದನ್ನು ಪೂರ್ಣಗೊಳಿಸಿ.**

೧. ಕರ್ಚೀಫಿಗೆ ಭಾಷೆಯ ಭೇದವಿಲ್ಲದಿದ್ದರೂ ..................... ಭೇದವಿದೆ

೨. ಕಾಲೇಜು ಕನ್ಯೆಯರು ಇದಕ್ಕೆ ..................... ಎಂದು ನಾಮಾಂಕಿತ ಇಟ್ಟುಕೊಂಡಿದ್ದಾರೆ.

೩. ಮೂಗಿಗೂ ಹಾಗೂ ಅಂಗಿಗೂ ..................... ಸಂಬಂಧವಿದೆ.

೪. ಚೀಲ ಮರೆತು ಹೋದರೆ .................. ಅಥವಾ ............. ತರಲು ಕರ್ಚೀಫ್ ಬಳಸಬಹುದು.

**ಇ. ಕೆಳಗೆ ಖಾಲಿ ಇರುವ ಸ್ಥಳಗಳನ್ನು ಅನುಕರಣ ಪದಗಳಿಂದ ತುಂಬಿ ಹೇಳಿರಿ**

***ಉದಾ:*** ಜೋರಾಗಿ ಗಾಳಿ ಬೀಸಿದಾಗ ಮರದಿಂದ ಹಣ್ಣುಗಳು ತಪತಪನೆ ಬಿದ್ದುಬಿಟ್ಟವು

೧. ರೈಲು ............ ಓಡಿತು.

೨. ಬೆಂಕಿ ............ ಉರಿಯಿತು.

೩. ಗಾಜು ............ ಹೊಳೆಯುತ್ತದೆ.

೪. ಕಣ್ಣಿನಿಂದ ನೀರು ............ ಹರಿಯಿತು.

೫. ಗಾಡಿ ............ ಚಲಿಸಿತು.

**ಈ. ಉದಾಹರಣೆಯನ್ನು ಗಮನಿಸಿ. ಕೆಳಗಿನ ಪದಗಳನ್ನು ಬಳಸಿ ಅರ್ಥವತ್ತಾದ ವಾಕ್ಯಗಳನ್ನು ರಚಿಸಿರಿ**

ಕಂಗೊಳಿಸು: ದೀಪಾಲಂಕಾರದಿಂದ ಮದುವೆಮನೆ ಅರಮನೆಯಂತೆ ಕಂಗೊಳಿಸುತ್ತಿತ್ತು.

ಹಂಬಲಿಸು: ಅನಾರೋಗ್ಯದಿಂದ ಮಗು ಹೊರಬಂದರೆ ಸಾಕು ಎಂದು ತಾಯಿ ಹಂಬಲಿಸಿದಳು.

ಕಾಯಿಪಲ್ಯೆ: ಪ್ರತಿ ಭಾನುವಾರ ನಾವು ಮಾರುಕಟ್ಟೆಗೆ ಹೋಗಿ ಕಾಯಿಪಲ್ಯೆ ತರುತ್ತೇವೆ.

ಬೆರಗು: ಅಷ್ಟು ಎತ್ತರದ ಗೊಮ್ಮಟೇಶನ ಮೂರ್ತಿಯನ್ನು ನೋಡಿದ ಮಕ್ಕಳು ಬೆರಗಾದರು.

## – ಪ್ರಾಯೋಗಿಕ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ವಿವಿಧ ತರಕಾರಿಗಳ ಹೆಸರುಗಳನ್ನು ಗಟ್ಟಿಯಾಗಿ ಓದಿ ಕಲಿಯಿರಿ**

ಬದನೆ, ಸೌತೆಕಾಯಿ, ಸೀಮೆಬದನೆ, ಕಂಚಲ (ಹಾಗಲಕಾಯಿ), ಗೋರಿಕಾಯಿ, ಬೆಂಡೆಕಾಯಿ, ಚಪ್ಪರದವರೆ, ಹುರುಳಿಕಾಯಿ, ಈರುಳ್ಳಿ, ಪಡವಲಕಾಯಿ, ಗೆಣಸು

**ಆ. ಕೆಳಗಿನ ಚಿತ್ರಗಳಲ್ಲಿರುವ ತರಕಾರಿಗಳನ್ನು ಹೆಸರಿಸಿ.**



**ಇ. ಕೆಳಗಿನ ಪದಗಳ ಅರ್ಥವ್ಯತ್ಯಾಸ ಹೇಳಿರಿ**

ಅಂಗಿ – ಅಂಗ, ಬೇಗೆ – ಬೇಗ, ಅಸ್ತ್ರ – ವಸ್ತ್ರ

**ಈ. ಗುಂಪಿಗೆ ಸೇರದ ಪದ ಕಂಡುಹಿಡಿಯಿರಿ**

ಕರ್ಚೀಫ್, ಟಾವೆಲ್, ಕೈವಸ್ತ್ರ, ದಸ್ತಿ

ಮಳೆ, ಚಳಿ, ಬೇಸಿಗೆ, ಮಧ್ಯಾಹ್ನ

ಹೆಂಗಸು, ಕನ್ಯೆ, ತರುಣಿ, ಹುಡುಗಿ

ಕನ್ನಡಕ, ಚಾಳೀಸು, ಪೆನ್ನು, ಚಶ್ಮ

**ಉ. ಅಂತ್ಯಾಕ್ಷರದಿಂದ ಮೊದಲಾಗುವ ಐದು ಪದಗಳ ಪದಬಂಡಿ ರಚಿಸಿ:**

*ಉದಾ:* ಹಂಬಲ, ಲಂಗ, ಗರಗಸ, ಸಹಜ, ಜಹಜು

ಬೇಸಿಗೆ –

**ಊ. ಸಮಾನಾರ್ಥಕ ಪದಗಳನ್ನು ನಿಘಂಟು ನೋಡಿ ಬರೆಯಿರಿ:**

ಬೆರಗು, ರಂಗು, ತಲೆ

**ಎ. ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ:**

ನಾಮಾಂಕಿತ, ಮಕ್ಕಳಿಂದ, ನೀನಾರು, ಬಹೂಪಯೋಗಿ, ಸಾಕಾದ, ಒಂದೆರಡು

**ಏ. ಇಲ್ಲಿ ಕೆಲವು ಅಪೂರ್ಣ ಗಾದೆಗಳನ್ನು ಕೊಡಲಾಗಿದೆ. ಅವುಗಳನ್ನು ಪೂರ್ಣಗೊಳಿಸಿ ಹೇಳಿರಿ.**

೧. ಹಾಸಿಗೆ ಇದ್ದಷ್ಟು ..........................

೨. ಕೈ ಕೆಸರಾದರೆ ..........................

೩. ಅಕ್ಕಿ ಮೇಲೆ .......................... ನೆಂಟರ ಮೇಲೆ ..........................

೪. ಹಣದ ಗಂಟಿದ್ದರೆ .......................... ನಂಟರು



| **ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು** |
|---|



# ೧೩. ಅಜ್ಜನ ತೋಟ (ಗದ್ಯ)

– ಕೆ.ಸಿ. ಶಶಿಧರ

**ಆಶಯ:** ನಮ್ಮದು ಕೃಷಿ ಪ್ರಧಾನ ಸಮಾಜ. ನಮಗೆ ಆಹಾರ ಕೊಡುವುದು ಕೃಷಿ. ಕೃಷಿ ನಿರಂತರವಾಗಿರಲು ನಮ್ಮ ಪರಿಸರದಲ್ಲಿ ರೈತನಿಗೆ ನೆರವಾಗುವ ಹುಳ–ಹುಪ್ಪಟೆ, ಸಾವಯವ ಇತ್ಯಾದಿ ಅರಿತು ಕೃಷಿಮಾಡಬೇಕು. ರಾಸಾಯನಿಕ ಗೊಬ್ಬರಗಳ ಬಳಕೆಯನ್ನು ಕಡಿಮೆ ಮಾಡಿ ಹೆಚ್ಚು ಹೆಚ್ಚು ನೈಸರ್ಗಿಕ ಗೊಬ್ಬರವನ್ನು ಉತ್ಪಾದಿಸಿ ಬಳಸಿಕೊಳ್ಳುವುದರಿಂದ ಆರೋಗ್ಯಕರವಾದ ಆಹಾರವನ್ನು ಬೆಳೆಯಬಹುದು ಎಂಬುದೇ ಈ ಪಾಠದ ಸಾರ.

ಮಕ್ಕಳು : ಅಜ್ಜಾ.. ಅಜ್ಜಾ.. ನೀ ತೋಟದಲ್ಲಿ ಇದ್ದೀಯಾ.. ನಾವು ಮನೆಯೆಲ್ಲಾ ಹುಡುಕಿ ಬಂದ್ವಿ.

ಅಜ್ಜ : ಓ ಊರಿಂದ ಬಂದ ಕೂಡ಼್್ಲೆ ತೋಟಕ್ಕೆ ಬಂದ್ರಾ, ನಾನೇ ಮನೆಗೆ ಬರ್ತಿದ್ದೆ. ರಜಾ ಬಂತು ಅಂತ ಈ ಅಜ್ಜನ ನೆನಪಾಯ್ತಾ.

ಮಕ್ಕಳು : ಹಾಗೇನಿಲ್ಲ, ನಿಮ್ಮ ನೆನಪು ಯಾವಾಗಲೂ ಆಗ್ತಾ ಇರುತ್ತೆ. ಬನ್ನಿ ಅಜ್ಜಾ... ಮನೆಗೆ ಹೋಗೋಣ (ಅಜ್ಜ ಮಕ್ಕಳ ಕೈಹಿಡಿದು ನಡೆಯುತ್ತಿರುವಾಗ) ಅಜ್ಜಾ... ತೋಟದಲ್ಲಿ ಕಾಲಿಟ್ಟರೆ ಬ್ರೆಡ್ ಮೇಲೆ ಕಾಲಿಟ್ಟ ಹಾಗೆ ಆಗುತ್ತೆ.. ಆದ್ರೆ ನಮ್ಮ ಶಾಲಾ ಮೈದಾನ ಗಟ್ಟಿ ಇರುತ್ತೆ ಯಾಕೆ?

ಅಜ್ಜ : ನಮ್ಮ ತೋಟ ಸಾವಯವ ತೋಟ

ಮಕ್ಕಳು : ಅಂದ್ರೆ....

ಅಜ್ಜ : ಸಾವಯವ ವಸ್ತು ಜಾಸ್ತಿ ಇದ್ದರೆ ಮಣ್ಣು ಮೃದುವಾಗಿರುತ್ತೆ

ಮಕ್ಕಳು : ಸಾವಯವ ವಸ್ತು ಅಂದ್ರೇನಜ್ಜ?

ಅಜ್ಜ : ನಮ್ಮ ಪರಿಸರದಲ್ಲಿ ಸಿಗುವ ಗಿಡಮರಗಳ ಎಲೆ, ಸೊಪ್ಪು ಬೆಳೆಯುಳಿಕೆ, ಸಗಣಿ, ಗಂಜಲ, ಪ್ರಾಣಿಗಳ ತ್ಯಾಜ್ಯ ಇತ್ಯಾದಿ ಬೆರೆತಾಗ ಮಣ್ಣು ಮೃದುವಾಗುತ್ತದೆ. ಇದರಿಂದ ಗಿಡ ಮರಗಳಿಗೆ ಉತ್ತಮ ಪೋಷಕಾಂಶ ದೊರೆಯುತ್ತದೆ. ಇಂತಹ ಮಣ್ಣು, ಮಳೆನೀರು ಭೂಮಿಯಲ್ಲಿ ಇಂಗಲು ಸಹಕಾರಿ.

ಮಕ್ಕಳು : (ಕಿಟಾರನೆ ಚೀರುತ್ತಾ) ಅಜ್ಜಾ! ಇಲ್ಲಿ ನೋಡು ಪುಟಾಣಿ ಹಾವು!!

ಅಜ್ಜ : ಎಲ್ಲಿ! ಅಯ್ಯೋ ಮಕ್ಕಳಾ ಅದು ಹಾವಲ್ಲ ರೈತನ ಮಿತ್ರ ಅಂತ ನೀವು ಕೇಳಿಲ್ವಾ? ಎರೆಹುಳು.. ಈ ಎರೆಹುಳು ಸಾವಯವ ವಸ್ತುಗಳನ್ನು ತಿಂದು ಹಿಕ್ಕೆ ಹಾಕುತ್ತದೆ. ಇದರ ಹಿಕ್ಕೆಯೇ ಎರೆ ಗೊಬ್ಬರ. ಎರೆಗೊಬ್ಬರ ಬೆಳೆಗಳು ಬೆಳೆಯಲು ಉತ್ತಮ ಪೋಷಕಾಂಶ ಒದಗಿಸುತ್ತೆ.

ಮಕ್ಕಳು : ಅಜ್ಜಾ... ನಿಂಗೆ ಈ ವಿಷಯ ಎಲ್ಲಾ ಹೇಗೆ ಗೊತ್ತಾಯ್ತು?

ಅಜ್ಜ : ಕಳೆದ ವರ್ಷ ಹಾಸನದಲ್ಲಿರುವ ಕೃಷಿವಿಜ್ಞಾನ ಕೇಂದ್ರಕ್ಕೆ ಹೋಗಿದ್ದೆ. ಅಲ್ಲಿ ನಮಗೆ ಎರೆಹುಳು ಸಾಕಣೆ, ಎರೆಗೊಬ್ಬರ ತಯಾರಿಕೆ ಮತ್ತು ಅದನ್ನು ಬಳಸುವ ಬಗ್ಗೆ ತಿಳಿಸಿದರು. ಶಿವಮೊಗ್ಗ ತಾಲ್ಲೂಕಿನ ದುಮ್ಮಳ್ಳಿ ಗ್ರಾಮದ ಶಿವಮ್ಮ ಎಂಬ ಹೆಂಗಸು ಬೆಳೆಸಿರುವ ತೋಟವನ್ನು ನೋಡಲು ನಾವು ಅನೇಕರು ಹೋಗಿದ್ದೆವು. ಅಬ್ಬಾ! ಆ ಮಹಿಳೆ ಎಷ್ಟೊಂದು ಎರೆಗೊಬ್ಬರ ತಯಾರಿಸಿದಾರೆ ಗೊತ್ತಾ?

ಮಕ್ಕಳು : ಅವರು ತುಂಬಾ ಓದಿದ್ದಾರಾ ಅಜ್ಜಾ?

ಅಜ್ಜ : ಅವರು ಮೂರನೆ ತರಗತಿವರೆಗೆ ಓದಿದ್ದಾರೆ. ಆದರೆ ಅವರ ಸಾಧನೆ ತುಂಬಾ ದೊಡ್ಡದು. ಅವರಿಗೆ ಕೃಷಿ ಪಂಡಿತ ಪ್ರಶಸ್ತಿ ದೊರಕಿದೆ.

ಮಕ್ಕಳು : ಅಜ್ಜ ನೀವೂ ಎರೆಹುಳು ಸಾಕಿದ್ದೀರಾ? ನಮಗೆ ತೋರಿಸಿ

ಅಜ್ಜ : ಹೌದು, ಬನ್ನಿರಿ, (ಎರೆಹುಳು ಸಾಕುವ ತೊಟ್ಟಿಗೆ ಕೈಹಾಕಿ ಬೊಗಸೆ ತುಂಬಾ ಎರೆಹುಳು ತೆಗೆದು ಮಕ್ಕಳ ಕೈಗೆ ಹಾಕುವರು, ಮಕ್ಕಳು ಚೀರುವರು) ಭಯಬೇಡ, ಇವು ನಮ್ಮ ಮಿತ್ರರಂತೆ, ನಮಗೇನೂ ಹಾನಿ ಮಾಡುವುದಿಲ್ಲ. ಸಾವಯವ ಕೃಷಿಗೆ ಇವು ಅತಿ ಅಗತ್ಯ. ನೋಡಿ ಇಲ್ಲಿ, ಪುಟ್ಟ ಗಂಗೆ ಬಂದಳಲ್ಲ! (ಕರುವಿನ ಕಡೆ ಕೈಮಾಡಿ ತೋರಿಸಿ) ಇವಳೂ ನಮ್ಮ ಸಾವಯವ ತೋಟಕ್ಕೆ ಸಹಾಯ ಮಾಡ್ತಾಳೆ. ಹಸು, ಕರು, ಎಮ್ಮೆಗಳು ನಮಗೆ ಸಗಣಿ, ಗಂಜಲ ಕೊಟ್ಟು ತೋಟದ ಫಲವತ್ತತೆ ಹೆಚ್ಚಿಸುತ್ತವೆ.





ಮಕ್ಕಳು : ಅಜ್ಜ, ಇಲ್ನೋಡಿ, ಈ ಹುಳು ತೊಗರಿ ಕಾಯಿ ತಿಂತಾ ಇದೆ.

ಅಜ್ಜ : ಪರವಾಗಿಲ್ಲ. ಅದು ಕಾಯಿಕೊರಕ. ಒಂದೋ ಎರಡೋ ಕೀಟ ಬಂದು ತಿಂದ್ರೆ ನಷ್ಟ ಇಲ್ಲ. ಹುಳುಗಳು ಹೆಚ್ಚಾದರೆ ಮಾತ್ರ ನಿಯಂತ್ರಿಸಬೇಕು.

ಮಕ್ಕಳು : ತುಂಬಾ ಹುಳುಗಳು ಹೀಗೆ ಬಂದು ಬಿಟ್ರೆ ಏನು ಮಾಡೋದು ಅಜ್ಜ?

ಅಜ್ಜ : ಕೆಲವರು ಔಷಧಿ ಹಾಕಿಬಿಡ್ತಾರೆ, ಔಷಧಿ ಹಾಕೋ ಮೊದ್ಲು ಅದನ್ನ ಬಳಸ್ದೆ ಇರೋಕೆ ಸಾಧ್ಯಾನಾ ನೋಡಬೇಕು. ಏಕೆಂದರೆ ತೊಗರಿ ನಾವು ತಿನ್ನುವ ಆಹಾರ ಅಲ್ಲವೇ?

ಮಕ್ಕಳು : ಹಾಗಿದ್ದರೆ ಏನು ಮಾಡಬೇಕು?

ಅಜ್ಜ : ಕಾಯಿಕೊರಕ ತೊಂದರೆ ಕೊಡುವ ಶತ್ರುಕೀಟವಾದರೆ ಅದನ್ನು ತಿಂದು ಬದುಕಿ ನಮಗೆ ಸಹಾಯ ಮಾಡುವ ಮಿತ್ರ ಕೀಟಗಳೂ ಇರುತ್ತವೆ. ಅವುಗಳನ್ನು ಗುರುತಿಸಿ ಬೆಳೆಸಬೇಕು. ಆಗ ಶತ್ರು ಕೀಟಗಳ ಹಾವಳಿ ಕಡಿಮೆಯಾಗುತ್ತದೆ. ಶೀತ ಆದಾಗ ನಾವೇನು ಮಾಡುತ್ತೇವೆ ಹೇಳಿ ನೋಡೋಣ

ಮಕ್ಕಳು : ಅಜ್ಜ, ಕಷಾಯ ಕುಡಿಯುತ್ತೇವೆ

ಅಜ್ಜ : ಹಾಗೆಯೇ ನಾವು ಗಿಡಮರಗಳಿಗೆ ರೋಗ ಬಂದಾಗ ಮತ್ತು ಕೀಟಗಳು ಧಾಳಿಮಾಡಿದಾಗ ನಮ್ಮ ಪರಿಸರದಲ್ಲಿ ಸಿಗುವ ಬೇವು, ತಂಬಾಕು, ಹೊಂಗೆ, ಹಿಪ್ಪೆ, ಸೀತಾಫಲ, ಬೆಳ್ಳುಳ್ಳಿ, ಬಜೆ, ಅರಿಶಿಣ, ಇತ್ಯಾದಿಗಳಿಂದ ಕಷಾಯ ತಯಾರಿಸಿ ಸಿಂಪಡಿಸಿದ್ರೆ ರೋಗ ಮತ್ತು ಕೀಟಗಳನ್ನು ನಿಯಂತ್ರಿಸಬಹುದು. ಹೀಗೆ ಆಹಾರ ಬೆಳೆ ಬೆಳೆಯಲು ರಾಸಾಯನಿಕ ಬಳಸದೆ, ಪ್ರಕೃತಿಯಲ್ಲೇ ದೊರೆಯುವ ವಸ್ತು ಬಳಸಿ ಪರಿಸರಕ್ಕೆ ಮತ್ತು ನಮಗೆ ಒಳ್ಳೆಯದಾದ ಬೆಳೆ ಬೆಳೆಯೋದೇ ಈ ಅಜ್ಜನ ಕೆಲಸ

ಮಕ್ಕಳು : (ಅಲ್ಲೇ ಇದ್ದ ಪೇರಳೆ ಹಣ್ಣು ಕಿತ್ತು ತಿಂದು) ಹೀಗೆ ಹಣ್ಣು ಕಿತ್ತು ತಿನ್ನುವುದು ನಮ್ಮ ಕೆಲಸ

ಅಜ್ಜ : ತಿನ್ನೋದೇ ಅಲ್ಲ, ನೀವು ಮುಂದೆ ಹೀಗೆ ಸಾವಯವದ ಬೆಳೆ ಬೆಳೆದರೆ ಪರಿಸರ ಉಳಿಸಬಹುದು. ಪರಿಸರವನ್ನ ನೀವು ಅದೆಷ್ಟು ಪ್ರೀತಿಸುತ್ತೀರ ಅಂತ ತೋರಿಸಬಹುದು.

ಮಕ್ಕಳು : ಅಜ್ಜ ಅಜ್ಜ ಆಯ್ತು ಅಜ್ಜ

ತುಂಬಾ ಜಾ..ಣ ನೀನಜ್ಜ

ಮನೆಗೆ ಹೋಗೋಣ ನಡೆಯಜ್ಜ

**ಲೇಖಕರ ಪರಿಚಯ :**



ಕೆ ಸಿ ಶಶಿಧರ ಅವರು ೧೯೬೪ರ ಜುಲೈ ೧೩ ರಂದು ದಾವಣಗೆರೆ ಜಿಲ್ಲೆಯ ಹೊನ್ನಾಳಿಯಲ್ಲಿ ಜನಿಸಿದರು. ಇವರು 'ಸಮಗ್ರ ಜಲಾನಯನ ಅಭಿವೃದ್ಧಿ' ಕುಷ್ಕಿ ಬೇಸಾಯ, ಹನಿ ನೀರಾವರಿ ಮುಂತಾದ ಇಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವರು ಈಗ ಶಿವಮೊಗ್ಗದ ಕೃಷಿ ಮಹಾವಿದ್ಯಾಲಯದಲ್ಲಿ ಕೃಷಿ ಇಂಜಿನಿಯರಿಂಗ್ ವಿಭಾಗದ ಮುಖ್ಯಸ್ಥರಾಗಿ ಕೆಲಸಮಾಡುತ್ತಿದ್ದಾರೆ.

**ಪದಗಳ ಅರ್ಥ :**

ಬೆಳೆಯುಳಿಕೆ –ಕಟವಾದ ನಂತರ ಉಳಿಯುವ ಕೂಳೆ : ಗಂಜಲ – ಗೋಮೂತ್ರ; ಇಂಗು – ಬತ್ತು; ಕಳಿತು – ಕೊಳೆತು; ಕಾಯಿಕೊರಕ – ಕಾಯಿರಂಧ್ರಮಾಡುವ ಹುಳು; ನಿಯಂತ್ರಣ – ತಡೆ.

**ಟಿಪ್ಪಣಿ:**

ಕೃಷಿಪಂಡಿತ ಪ್ರಶಸ್ತಿ – ಕೃಷಿಯಲ್ಲಿ ಮಹತ್ತರ ಸಾಧನೆ ಮಾಡಿದವರಿಗೆ ರಾಜ್ಯ ಸರ್ಕಾರ ನೀಡುವ ಪ್ರಶಸ್ತಿ



**– ಅಭ್ಯಾಸ ಚಟುವಟಿಕೆ –**

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ಮಣ್ಣು ಮೃದುವಾಗಿದ್ದುದು ಏಕೆ?

೨. ಎರೆಗೊಬ್ಬರ ಎಂದರೇನು?

೩. ಎರೆಹುಳುಸಾಕಣೆಯ ಮಾಹಿತಿ ಅಜ್ಜನಿಗೆ ದೊರೆತುದು ಎಲ್ಲಿ?

೪. ಕೃಷಿಪಂಡಿತ ಪ್ರಶಸ್ತಿ ಪಡೆದವರು ಯಾರು?

೫. ಕಾಯಿಕೊರಕ ರೈತನಿಗೆ ಹಾನಿಕಾರಕ ಹೇಗೆ?

೬. ಸಾವಯವ ವಸ್ತುಗಳು ಯಾವುವು?

೭. ಎರೆಹುಳು ರೈತನ ಮಿತ್ರ ಏಕೆ?

೮. ಮಿತ್ರಕೀಟಗಳು ಹೇಗೆ ಸಹಾಯಮಾಡುತ್ತವೆ?

೯. ರೋಗ ನಿಯಂತ್ರಣ ಕಷಾಯ ತಯಾರಿಸುವುದು ಹೇಗೆ?

೧೦. ಸಾವಯವ ಕೃಷಿ ಪರಿಸರ ರಕ್ಷಣೆಗೆ ಹೇಗೆ ಸಹಾಯಮಾಡುತ್ತದೆ?

**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ಸಾವಯವ ವಸ್ತು ಎಂದರೇನು?

೨. ಎರೆಹುಳು ಸಸ್ಯಗಳಿಗೆ ಹೇಗೆ ಸಹಕಾರಿ?

೩. ಕೃಷಿವಿಜ್ಞಾನ ಕೇಂದ್ರದಲ್ಲಿ ಏನು ತಿಳಿಸುತ್ತಾರೆ?

**ಇ. ಪದಗಳನ್ನು ಮಾದರಿಯಂತೆ ಬಿಡಿಸಿ ಬರೆದು ವಿಭಕ್ತಿ ಪ್ರತ್ಯಯ ಹೆಸರಿಸಿ**

***ಮಾದರಿ:*** ತೋಟದಲ್ಲಿ–ತೋಟ+ಅಲ್ಲಿ–ಸಪ್ತಮಿ ವಿಭಕ್ತಿ ಪ್ರತ್ಯಯ

ಊರಿನಿಂದ, ಮರಕ್ಕೆ, ವಸ್ತುಗಳನ್ನು, ರೈತನ, ತೋಟವನ್ನು, ಹುಳುವು, ತೋಟಕ್ಕೆ, ಔಷಧಿಯನ್ನು.



## – ಪ್ರಾಯೋಗಿಕ ಚಟುವಟಿಕೆ –

**ಅ. ರಹೀಮ, ಸೋಮಣ್ಣ ಮತ್ತು ಡೇವಿಡ್ ಎಂಬ ಮೂವರು ರೈತರು ಈ ಸಲದ ಬೆಳೆಯಿಂದ ಖುಷಿಯಾಗಿ ಮಾತನಾಡಿಕೊಳ್ಳುತ್ತಿದ್ದಾರೆ. ಅವರ ನಡುವಿನ ಸಂಭಾಷಣೆ ಬರೆಯಿರಿ.**



**ಆ. ದೊಡ್ಡರಂಗೇಗೌಡರ ಈ ಪದ್ಯವನ್ನು ತರಗತಿಯಲ್ಲಿ ಗಟ್ಟಿಯಾಗಿ ಓದಿರಿ**

ಉಳುವೋನೆ ಲೋಕಕ್ಕೆ ಬೇಕಾದ ಗೆಳೆಯ
ಹಳ್ಳಿಗೂ ದಿಲ್ಲಿಗೂ ಕೊಡ್ತಾನೆ ಬೆಳೆಯ
ಭೂತಾಯ ಬಂಟ ಈ ನೇಗಿಲ ನಂಟ
ಇವನಿಂದ್ಲೆ ಅಳಿಯೋದು ಹಸಿವಿನಾ ಸಂಕಟ॥

**ಇ. ಕೆಳಗೆ ಕೊಟ್ಟಿರುವ ಚಿತ್ರಗಳು ಕೆಲವು ಪಡೆನುಡಿ / ಗಾದೆಗಳನ್ನು ಸೂಚಿಸುತ್ತವೆ. ಪ್ರತೀ ಚಿತ್ರ ಸೂಚಿಸುವ ಪಡೆನುಡಿ / ಗಾದೆಯನ್ನು ಕಂಡುಹಿಡಿದು ಚಿತ್ರಗಳೊಂದಿಗೆ ಹೊಂದಿಸಿರಿ. ಆ ಪಡೆನುಡಿ / ಗಾದೆಗಳು ಸೂಚಿಸುವ ಅರ್ಥವನ್ನು ಅಧ್ಯಾಪಕರಿಂದ ಕೇಳಿ ತಿಳಿದು ವಾಕ್ಯದಲ್ಲಿ ಉಪಯೋಗಿಸಿರಿ.**

೧. ಪಿತ್ತ ನೆತ್ತಿಗೇರು ............

೨. ಮಂತ್ರಕ್ಕೆ ಮಾವಿನಕಾಯಿ ಉದುರುವುದೇ? ............

೩. ಒಂದು ಕಾಲು ಹೊರಗೆ, ಒಂದು ಕಾಲು ಒಳಗೆ ............

೪. ಕೂತು ತಿಂದರೆ ಕುಡಿಕೆ ಹಣ ಸಾಲದು ............

೫. ಹಿತ್ತಾಳೆ ಕಿವಿ ............

೬. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ? ............


೧


೨


೩


೪


೫


೬




✤ ✤ ✤ ✤ ✤

# ೧೪. ಬಾದಾಮಿ (ಗದ್ಯ)

– ಬಾ ರಾ ಗೋಪಾಲ

**ಆಶಯ :** ಕರ್ನಾಟಕ ರಾಜ್ಯ ಇತಿಹಾಸ ಪೂರ್ವದಿಂದಲೂ ಸಂಗೀತ, ಸಾಹಿತ್ಯ, ಕಲೆಗಳಲ್ಲಿ ತನ್ನದೇ ಆದ ವೈಭವವನ್ನು ಮೆರೆದಿದೆ. ನಾಡಿನ ರಾಜಮಹಾರಾಜರು ಪರಾಕ್ರಮಿಗಳು ಮಾತ್ರವಲ್ಲದೆ ಕಲಾಪೋಷಕರೂ ಆಗಿದ್ದರು. ಆ ಕಾರಣದಿಂದಲೇ ರಾಜ್ಯಾದ್ಯಂತ ಅದ್ಭುತವಾದ ಶಿಲ್ಪಕಲಾಮಂದಿರಗಳು ತಮ್ಮ ಸೊಬಗಿನಿಂದ ಪ್ರೇಕ್ಷಕರ ಕಲಾಪ್ರವಾಸಿಗಳ ಕಣ್ಮನ ತಣಿಸುತ್ತಿವೆ. ಇಂತಹವುಗಳಲ್ಲಿ ಬಾದಾಮಿಯ ಗುಹಾಂತರ ದೇವಾಲಯಗಳು ವಿಶ್ವವಿಖ್ಯಾತವಾಗಿವೆ. ಈ ಪ್ರದೇಶದ ಇತಿಹಾಸದೊಂದಿಗೆ ಶಿಲ್ಪಕಲೆಯ ಸಿರಿಯನ್ನು ಪರಿಚಯಿಸುವುದು ಈ ಪಾಠದ ಆಶಯ.





ಕನ್ನಡಿಗರ ಕಲಾವೈಭವವನ್ನು ಮೆರೆಸುವ ಕರ್ನಾಟಕದ ಐತಿಹಾಸಿಕ ಸ್ಥಳಗಳಲ್ಲಿ ಬಾದಾಮಿ ಪ್ರಮುಖವೂ ಪ್ರಾಚೀನವೂ ಆದ ಒಂದು ಸ್ಥಳ. ಬಾಗಲಕೋಟೆ ಜಿಲ್ಲೆಯಲ್ಲಿರುವ ಬಾದಾಮಿಯು ಒಂದು ತಾಲೂಕು ಕೇಂದ್ರವೂ ಹೌದು. ಬಾದಾಮಿಗೆ ವಾತಾಪಿ–ವಾತಾಪಿಪುರ ಎಂಬ ಇನ್ನೊಂದು ಹೆಸರು ಇದ್ದಿತು.

ಈಗಿನ ಬಾದಾಮಿಗೆ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿದೆ. ಆದರೆ ಈ ಊರಿನ ಖಚಿತ ಇತಿಹಾಸವು ಕ್ರಿ ಶ ೬–೭ನೇ ಶತಮಾನದಿಂದ ಪ್ರಾರಂಭವಾಗುತ್ತದೆ.

ಬಾದಾಮಿಯಲ್ಲಿ ನಾಲ್ಕು ಗುಹಾಂತರ್ಗತ ದೇವಾಲಯಗಳಿವೆ. ಇವುಗಳಲ್ಲಿ ಒಂದು ಶೈವ, ಎರಡು ವೈಷ್ಣವ ಹಾಗೂ ಒಂದು ಜೈನ ಗುಹೆಗಳು. ಮೊದಲನೆಯ ಗುಹೆ ಅಲ್ಲಿನ ಗುಹೆಗಳಲ್ಲೆಲ್ಲಾ ತಗ್ಗಾದುದು. ಇಲ್ಲಿಂದ ಎರಡನೆಯ ಗುಹೆಗೆ ಮೆಟ್ಟಿಲುಗಳು ಮುಂದುವರೆದಿವೆ. ಎರಡನೆಯ ಗುಹೆಯ ಎಡಕ್ಕೆ ನೈಸರ್ಗಿಕವಾದ ಒಂದು ಗುಹೆ ಇದೆ. ಈ ಮೂರನೆಯ ಗುಹೆಯನ್ನು ಬೌದ್ಧ ಗುಹೆ ಎಂದು ಕರೆಯುತ್ತಾರೆ. ಎರಡನೆಯ ಗುಹೆಯಿಂದ ನಾಲ್ಕನೆಯ ಗುಹೆಯ ಆವರಣದವರೆಗೂ ವೈಷ್ಣವ ಗುಹೆಗಳು. ಬಲಗಡೆಯ ಮೆಟ್ಟಿಲುಗಳನ್ನು ಹತ್ತಿಹೋದರೆ ಗುಡ್ಡದ ಮೇಲಿರುವ ಕೋಟೆಯನ್ನು ಕಾಣುತ್ತೇವೆ. ನಾಲ್ಕನೆ ಗುಹೆಯಿಂದ ಮೆಟ್ಟಿಲುಗಳನ್ನು ಇಳಿದು ಐದನೆಯ ಜೈನಗುಹೆಗೆ ಹೋಗಬೇಕು.

ಮೊದಲನೆಯ ಗುಹೆಯನ್ನು ಜೀರ್ಣೋದ್ಧಾರ ಮಾಡಲಾಗಿದ್ದು ಕಿರಿದಾದ ಬಲಭಾಗದಲ್ಲಿ ಕುಸಿದು ಬಿದ್ದಿದ್ದ ಸಣ್ಣದಾದ ಗರ್ಭಗುಡಿಯನ್ನು ಆವರಿಸಿದೆ. ಇದರ ಬಲಕ್ಕೆ ಸುಂದರವಾದ ನಟರಾಜನ ವಿಗ್ರಹವಿದೆ. ಈ ನಟರಾಜನಿಗೆ ೧೮ ಕೈಗಳು. ಡಬಲು, ತಂತುವಾದ್ಯ, ತ್ರಿಶೂಲ, ಪರಶು ಮುಂತಾದವುಗಳನ್ನು ಒಂದೊಂದು ಕೈಯಲ್ಲಿ ಹಿಡಿದಿರುವ ಈತನು ಪೀಠ ಒಂದರ ಮೇಲೆ ಬಲಗಾಲನ್ನೂರಿ, ಎಡಗಾಲಿನ ಹಿಮ್ಮಡಿಯನ್ನು ಮೇಲಕ್ಕೆತ್ತಿ ದ್ವಿಭಂಗಿಯಲ್ಲಿ ಕುಣಿಯುತ್ತಿದ್ದಾನೆ. ಈತನ ಎಡಗಡೆಗೆ ಇರುವ ಗಣಪತಿ ನರ್ತಿಸುವ ಹಾಗೆ ಕಂಡುಬರುತ್ತದೆ.



ಆಧಾರಪೀಠದ ಮೇಲೆ ಬಹಳ ಸುಂದರವಾದ ಹರಿಹರನ ನಿಂತಿರುವ ವಿಗ್ರಹವಿದೆ. ಇದು ಶಿವ ಮತ್ತು ವಿಷ್ಣುವಿನ ಸಂಯೋಗಮೂರ್ತಿ. ಶಿವನ ಭಾಗವನ್ನು ಗಂಡು ಕೊಡಲಿ ಮತ್ತು ಸರ್ಪಗಳನ್ನು ಹಿಡಿದಿರುವ ಕೈಗಳಿಂದಲೂ ತ್ರಿಶೂಲ ಧಾರಿಯಾದ ನಂದಿ ಬಲಭಾಗದಲ್ಲಿ ನಿಂತಿರುವುದರಿಂದಲೂ ಗುರುತಿಸಬಹುದು. ಚಿತ್ರದ ಎಡಭಾಗ ವಿಷ್ಣುಭಾಗ. ವಿಷ್ಣು ಶಂಖವನ್ನು ಹಿಡಿದಿದ್ದಾನೆ. ಚಿತ್ರದ ಬಲಗಡೆ ಉಮಾ ಹಾಗೂ ಲಕ್ಷ್ಮೀ ಮೂರ್ತಿಗಳಿವೆ. ವಿಗ್ರಹದ ಕಲೆಯ ಶಿವನ ಅರ್ಧಭಾಗ ಜಟಾಧಾರಿಯಾಗಿ ಅರ್ಧಚಂದ್ರನನ್ನು ಹೊತ್ತಿದೆ. ವಿಷ್ಣುವಿನ ಭಾಗ ಮುಕುಟಧಾರಿ ವಿಗ್ರಹದ ಎಡಭಾಗ ಆಭರಣಗಳಿಂದ ಅಲಂಕೃತವಾಗಿದ್ದರೆ, ಬಲಭಾಗ ಸರ್ಪ ಹಾಗೂ ಮುಂಡಮಾಲೆಗಳಿಂದ ಕೂಡಿದೆ.

ಕೈಸಾಲೆಯ ಬಲಗೋಡೆಯ ಮೇಲೆ ಸುಮಾರು ೮ ಅಡಿ ಎತ್ತರದ ಅರ್ಧನಾರೀಶ್ವರ ವಿಗ್ರಹವಿದೆ. ಶೈವ ಗುಹೆಯಿಂದ ೬೪ ಮೆಟ್ಟಿಲುಗಳನ್ನು ಏರಿ ಹೋದರೆ ಎರಡನೆಯ ಗುಹೆ ಬರುತ್ತದೆ. ಎರಡು ಮತ್ತು ಮೂರನೆಯ ಗುಹೆಗಳೆರಡೂ ಶ್ರೀ ವಿಷ್ಣುವಿಗೆ ಸಂಬಂಧಿಸಿದ ಚಿತ್ರಗಳನ್ನು ಹೊಂದಿರುವುದರಿಂದ ಇದಕ್ಕೆ ವೈಷ್ಣವ ಗುಹೆಗಳೆಂದು ಹೆಸರು ಬಂದಿದೆ. ಭಾಗವತ ಪುರಾಣದಲ್ಲಿ ಬಂದಿರುವ ವಿಷ್ಣುವಿನ ವರಾಹವತಾರದ ದೊಡ್ಡ ಶಿಲ್ಪ ಇಲ್ಲಿದೆ.

ಮೂರನೆಯ ಗುಹೆ ಇಲ್ಲಿನ ಗುಹೆಗಳಲ್ಲಿ ಅತಿ ವಿಸ್ತಾರವಾದ ಹಾಗೂ ಹೆಚ್ಚು ಅಲಂಕೃತವಾದ ಗುಹೆ. ಈ ಗುಹೆ ಅನೇಕ ಉಬ್ಬು ಚಿತ್ರಗಳಿಂದ ಅಲಂಕೃತವಾಗಿದೆ. ಅದರಲ್ಲಿ ವಾಮನ ಅವತಾರದ ಶಿಲ್ಪ ಬಲಿಚಕ್ರವರ್ತಿಯ ಕತೆಯನ್ನು ಬಿಂಬಿಸುತ್ತದೆ. ಮತ್ತೊಂದು ಮುಖ್ಯವಾದ ಉಬ್ಬು ಶಿಲ್ಪವೆಂದರೆ ಆದಿಶೇಷನ ಮೇಲೆ ಆಸೀನವಾಗಿರುವ ವಿಷ್ಣುವಿನ ಚಿತ್ರ. ಕೈಸಾಲೆಯ ಬಲ ಮೂಲೆಯಲ್ಲಿರುವ ಚಿಕ್ಕಗೋಡೆಯ ಮೇಲೆ ವಿಷ್ಣುವಿನ ನರಸಿಂಹನ ಅವತಾರವನ್ನು ತಿಳಿಸುವ ಸುಂದರ ಉಬ್ಬು ಶಿಲ್ಪವಿದೆ. ಬಾದಾಮಿಯ ಗುಹೆಗಳಲ್ಲಿ ಕೊನೆಯದು ಜೈನ ಗುಹೆ.  ಎರಡನೆಯ ಗುಹೆಯ ಎಡಕ್ಕೆ ಸುಮಾರು ೨೫–೩೦ ಅಡಿಗಳ ಅಂತರದಲ್ಲಿ ಒಂದು ನೈಸರ್ಗಿಕ ಗುಹೆ ಇದೆ. ಇದನ್ನೇ ನೈಸರ್ಗಿಕ ಬೌದ್ಧ ಗುಹೆ ಎನ್ನುವರು.

**ಲೇಖಕರ ಪರಿಚಯ :**



ಬಾ. ರಾ. ಗೋಪಾಲ. ಇವರ ಪೂರ್ಣ ಹೆಸರು ಬಾಲಕೃಷ್ಣನ್ ರಾಜಗೋಪಾಲ ಎಂಬುದಾಗಿ. ಇವರು ೨೧ ಅಕ್ಟೋಬರ್ ೧೯೩೦ರಂದು ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದಲ್ಲಿ ಹುಟ್ಟಿದರು. ಶಾಸನತಜ್ಞರಾದ ಇವರು ಕರ್ನಾಟಕದ ವಾಸ್ತುಶಿಲ್ಪ, ಬನವಾಸಿಯ ಕದಂಬರು, 'ಕರ್ನಾಟಕದ ಕಲೆಗಳು–ವಾಸ್ತು' ಮುಂತಾದ ಪುಸ್ತಕಗಳ ಜೊತೆಗೆ ಕರ್ನಾಟಕದ ಇತಿಹಾಸವನ್ನು ಕುರಿತಂತೆ ಇಂಗ್ಲಿಷಿನಲ್ಲೂ ಅನೇಕ ಕೃತಿಗಳನ್ನು ರಚಿಸಿದ್ದಾರೆ.  ಇವರಿಗೆ ಶ್ರೇಷ್ಠ ಸಾಹಿತಿ ಪ್ರಶಸ್ತಿ ಮೊದಲಾದ ಹಲವಾರು ಪ್ರಶಸ್ತಿ ಪುರಸ್ಕಾರಗಳು ಲಭಿಸಿವೆ.



***ಈ ಪಾಠವನ್ನು ಅವರ ಬಾದಾಮಿ ಎಂಬ ಕೃತಿಯಿಂದ ಆರಿಸಿಕೊಳ್ಳಲಾಗಿದೆ.***

**ಪದಗಳ ಅರ್ಥ :**

ವಿಶ್ವವಿಖ್ಯಾತ – ಜಗತ್ ಪ್ರಸಿದ್ಧವಾದ; ತಣಿ – ತೃಪ್ತಿಪಡು; ಗುಹಾಂತರ ದೇವಾಲಯ – ಗುಹೆಯೊಳಗೆ ಇರುವ ದೇವಾಲಯ; ಐತಿಹಾಸಿಕ – ಚಾರಿತ್ರಿಕ; ಪ್ರಾಚೀನ – ಹಿಂದಿನ; ಕಲಿ – ಶೂರ; ಸ್ಮರಣೀಯ – ನೆನಪಿನಲ್ಲಿಡಬೇಕಾದ; ಪ್ರಖ್ಯಾತ – ಪ್ರಸಿದ್ಧ; ಗರ್ಭಗುಡಿ – ದೇವಾಲಯದಲ್ಲಿ ಮೂಲವಿಗ್ರಹವನ್ನು ಇರಿಸಿರುವ ಸ್ಥಳ; ಅಜಯ – ಜಯಿಸಲಾಗದ; ಜಟಾಧಾರಿ – ಜಟೆಯನ್ನು ಧರಿಸಿರುವ; ಮುಕುಟಧಾರಿ – ಕಿರೀಟ ಧರಿಸಿದವ; ಮುಂಡಮಾಲೆ – ತಲೆಗಳನ್ನು ಮಾಲೆಯಾಗಿ ಧರಿಸಿದವ; ಜೀರ್ಣೋದ್ಧಾರ – ಹಳೆಯದನ್ನು ಸರಿಪಡಿಸುವುದು; ಅರ್ಧನಾರೀಶ್ವರ – ಅರ್ಧ ಭಾಗ ನಾರಿ ಮತ್ತರ್ಧ ಭಾಗ ಈಶ್ವರ; ಸರ್ಪ – ಹಾವು; ನೈಸರ್ಗಿಕ ಗುಹೆ – ಕೃತಕವಲ್ಲದ ಗುಹೆ.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ಬಾದಾಮಿಗೆ ಇರುವ ಮತ್ತೊಂದು ಹೆಸರು ಯಾವುದು?

೨. ಬಾದಾಮಿಯಲ್ಲಿರುವ ನಾಲ್ಕು ಗುಹಾಂತರ ದೇವಾಲಯಗಳನ್ನು ಹೆಸರಿಸಿ

೩. ಶಿವ ಮತ್ತು ವಿಷ್ಣು ಒಂದುಗೂಡಿರುವ ಮೂರ್ತಿಯನ್ನು ಏನೆನ್ನುತ್ತಾರೆ?

೪. ಎರಡು ಮತ್ತು ಮೂರನೆ ಗುಹೆಗಳನ್ನು ವೈಷ್ಣವ ಗುಹೆಗಳು ಎಂದು ಏಕೆ ಕರೆಯಲಾಗಿದೆ?

೫. ಬಲಿಚಕ್ರವರ್ತಿಯ ಕಥೆಯನ್ನು ಬಿಂಬಿಸುವ ಶಿಲ್ಪ ಯಾವುದು?

೬. ಬಾದಾಮಿಯಲ್ಲಿರುವ ನೈಸರ್ಗಿಕ ಗುಹೆ ಯಾವುದು?

**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ:**

೧. ಹರಿಹರ ಶಿಲ್ಪದಲ್ಲಿ ಶಿವನ ಭಾಗವನ್ನು ಹೇಗೆ ಗುರುತಿಸಬಹುದು?

೨. ನಟರಾಜ ವಿಗ್ರಹದ ಸೊಬಗನ್ನು ತಿಳಿಸಿರಿ

**ಇ. ಕೆಳಗಿನ ಪದಗಳಲ್ಲಿರುವ ವಿಭಕ್ತಿಪ್ರತ್ಯಯವನ್ನು ಗುರುತಿಸಿ**

ಕೈಸಾಲೆಯ, ಚಿತ್ರಗಳಿಂದ, ದಿಕ್ಕುಗಳಲ್ಲಿ, ವೈಭವವನ್ನು, ಬಾದಾಮಿಯು, ರಾಜ್ಯಕ್ಕೆ

**ಈ. ಕೆಳಗಿನ ಪದಗಳನ್ನು ಕೂಡಿಸಿ ಬರೆಯಿರಿ:**

ಇತಿಹಾಸ+ಇದೆ, ಬಾದಾಮಿ+ಅಲ್ಲಿ, ಗುಹೆ+ಅನ್ನು, ಸುಂದರ+ಆದ, ಕುಣಿಯುತ್ತಾ+ಇದ್ದಾನೆ, ವರಾಹ+ಅವತಾರ, ಶಿಲ್ಪ+ಎಂದರೆ, ಮೂಲೆ+ಅಲ್ಲಿ.

**ಉ. ವಿರುದ್ಧಾರ್ಥಕ ಪದಗಳನ್ನು ಬರೆಯಿರಿ:**

ಅಂತ, ಸುಖ

**ಊ.ಗಮನಿಸಿ:**

**ಉಬ್ಬುಶಿಲ್ಪ:** ಇದು ಶಿಲ್ಪಕಲೆಯಲ್ಲಿ ಕಠಿಣವೂ ವಿಶಿಷ್ಟವೂ ಆದ ಒಂದು ರೀತಿ. ಇಲ್ಲಿ ಶಿಲ್ಪಿಯು ಶಿಲ್ಪಕಲಾಕೃತಿಯ ಭಾಗವನ್ನು ಬಿಟ್ಟು ಉಳಿದ ಕಲ್ಲು ಬಂಡೆಗಳ ಹೆಚ್ಚಿನ ಭಾಗವನ್ನು ಕೆತ್ತಿ ತೆಗೆಯುತ್ತಾನೆ. ಮಧ್ಯದಲ್ಲಿ ಉಳಿದ ಉಬ್ಬಿನ ಭಾಗದಲ್ಲಿ ಶಿಲ್ಪಾಕೃತಿಗಳನ್ನು ನಿರ್ಮಿಸುತ್ತಾನೆ. ಇಂಥ ಶಿಲ್ಪವನ್ನು ಉಬ್ಬು ಶಿಲ್ಪ, ಉಬ್ಬು ಚಿತ್ರ ಎಂದು ಕರೆಯುತ್ತಾರೆ.

**ಕೈಸಾಲೆ:** ಗರ್ಭಗೃಹದ ಮುಂದಿನ ಮಂಟಪದ ರೂಪದ ವಾಸ್ತುಶಿಲ್ಪ. ಇದು ಹೊಯ್ಸಳರ ಸುಖನಾಸಿಯೂ ಅಲ್ಲದ, ಪ್ರಾಂಗಣವೂ ಅಲ್ಲದ ಮೂಲಮಂದಿರದ ಮುಂದಿನ ಭಾಗ.

## – ಪ್ರಾಯೋಗಿಕ ಚಟುವಟಿಕೆ –

೧. ನೀವು ನೋಡಿರುವ ಐತಿಹಾಸಿಕ ಸ್ಥಳವನ್ನು ಕುರಿತ ವಿಷಯಗಳನ್ನು ನಿಮ್ಮ ಸಹಪಾಠಿಗಳ ಜೊತೆ ಹಂಚಿಕೊಳ್ಳಿರಿ.

೨. ಬಲಿಚಕ್ರವರ್ತಿಯ ಕತೆಯನ್ನು ಉಪಾಧ್ಯಾಯರಿಂದ ಕೇಳಿ ತಿಳಿಯಿರಿ.

## – ವ್ಯಾಕರಣಾಭ್ಯಾಸ –

**ಕೆಳಗಿನ ವಾಕ್ಯಗಳಲ್ಲಿ ವಸ್ತುವಾಚಕ, ಗುಣವಾಚಕ, ಸಂಖ್ಯಾವಾಚಕ ಮತ್ತು ಸರ್ವನಾಮಗಳನ್ನು ಗುರುತಿಸಿ.**

೧. ಬಾಗಲಕೋಟೆ ಜಿಲ್ಲೆಯಲ್ಲಿರುವ ಬಾದಾಮಿ ಒಂದು ತಾಲೂಕು ಕೇಂದ್ರ.

೨. ಇದರ ಬಲಕ್ಕೆ ಸುಂದರವಾದ ನಟರಾಜನ ವಿಗ್ರಹವಿದೆ.

೩. ಶೈವ ಗುಹೆಯಿಂದ ಅರವತ್ತನಾಲ್ಕು ಮೆಟ್ಟಿಲುಗಳನ್ನು ಏರಿ ಹೋದರೆ ಎರಡನೆಯ ಗುಹೆ ಇದೆ.

೪. ಇವರ ಪೂರ್ಣ ಹೆಸರು ಬಾಲಕೃಷ್ಣನ್ ರಾಜಗೋಪಾಲ.



**ದೇಶ ಸುತ್ತಿ ನೋಡು; ಕೋಶ ಓದಿನೋಡು**



# ೧೫. ಬಿಡು ಭ್ರಮೆಯ (ಪದ್ಯ)

– ಬಿ ಟಿ ಲಲಿತಾ ನಾಯಕ್

**ಆಶಯ :** ಸಮಾಜಜೀವಿಯಾದ ಮಾನವನಿಗೆ ಬೇರೆಲ್ಲರಿಗಿಂತಲೂ ತಾನೇ ಹೆಚ್ಚು, ತಾನು ಮಾಡಿದುದೇ ಆಡಿದುದೇ ದೊಡ್ಡದು ಎಂಬ ಭಾವ ಸಹಜವಾಗಿ ಇರುತ್ತದೆ. ಆದರೆ ಪ್ರಕೃತಿಯ ಒಂದು ಭಾಗವಾಗಿರುವ ಮಾನವ, ತನ್ನ ಸುತ್ತ ಇರುವ ಇತರ ಎಲ್ಲವನ್ನು ನೋಡಿ ತನ್ನ ಅಹಂಕಾರವನ್ನು ಮರೆತು ತನ್ನನ್ನು ತಿದ್ದಿಕೊಳ್ಳಬೇಕು. ತನಗಾಗಿ ಮಾತ್ರ ಬದುಕಿದರೆ ಸಾಲದು, ಇತರರಿಗಾಗಿ ಬದುಕಬೇಕು, ತನಗಿಂತ ಇತರರು ಹಿರಿಯರು ಎಂಬುದನ್ನು ಮನಗಾಣಬೇಕು, ತಾನು ಮಾತ್ರ ಮೇಲು ಎಂಬ ಭ್ರಮೆಯಿಂದ ಹೊರಬರಬೇಕು ಎಂಬುದೇ ಈ ಪದ್ಯದ ಆಶಯ.



ನಾ ಮೇಲಿನವನು ಬಲು ದೊಡ್ಡವನು ಎಂದು
ಮೆರೆದಾಡಬೇಡ ಗೆಳೆಯ
ನಿನಗಿಂತ ಮಿಗಿಲವರು ಇದ್ದಾರು ಭುವಿಯಲ್ಲಿ
ಸುಳ್ಳು ಭ್ರಮೆಯಲಿ ನೀ ಮುಳುಗಬೇಡ

ಬಲುದೊಡ್ಡ ಚಂದಿರನು ಇರುಳೆಲ್ಲ ಬೆಳಗುವನು
ಮರೆಯಾಗುವನು ಹಗಲ ಕಿರಣದಲ್ಲಿ
ಉರಿಯುವನು ಸೂರ್ಯ ಅವಗಿಂತ ಹಿರಿಯ
ಕಳೆದು ಹೋಗುವನು ಇರುಳ ಸೆರಗಿನಲ್ಲಿ

ಗ್ರಹತಾರೆಗಳ ಹೊತ್ತ ಗಗನಕ್ಕೆ ಮಿಗಿಲುಂಟೆ
ಸಾರಿ ಹೇಳಿತೆ ತಾ ಮಿಗಿಲು ಎಂದು
ಅಣುವಲ್ಲಿ ಅಣುವಾದ ಕಣ್ಣಿದ್ದು ಕುರುಡಾದ
ನೀ ಕೂಗಬಹುದು ಹಾಗೆಂದು

ಜನನ ಮರಣದ ಒಗಟ ಬಿಚ್ಚಿಹೇಳುವೆಯ ನೀನು
ಲೋಕದೊಳಿತಿಗೆ ನಿನ್ನ ಕಾಣ್ಕೆ ಏನು
ಹೇಳು ಗೆಳೆಯನೆ ಹೇಳು ಎದೆ ತಟ್ಟಿ ಹೇಳು
ಪ್ರಕೃತಿಯ ಹಿರಿತನಕೆ ನೀ ಸಾಟಿ ಏನು?



**ಕವಿಯಿತ್ರಿಯ ಪರಿಚಯ :**



ಶ್ರೀಮತಿ ಬಿ ಟಿ ಲಲಿತಾ ನಾಯಕ್ ಅವರು ಚಿಕ್ಕಮಗಳೂರು ಜಿಲ್ಲೆಯ ತಂಗಲಿ ತಾಂಡ್ಯದಲ್ಲಿ ೧೯೪೫ರಲ್ಲಿ ಜನಿಸಿದರು. "ಇವರು ವಿಧಾನ ಪರಿಷತ್ ಸದಸ್ಯರಾಗಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರಾಗಿ ಸೇವೆ ಸಲ್ಲಿಸಿರುತ್ತಾರೆ." ಇವರು ದಲಿತವಾಣಿಗೆ ಶಕ್ತಿ ತುಂಬುತ್ತಿರುವ ಕವಿಯತ್ರಿ 'ಚಂದ್ರ ಪರಾಭವ', ಭಟ್ಟನ ಕನಸು, ನೆಲೆಬೆಲೆ, ಇದೇ ಕೂಗು ಮತ್ತೆ ಮತ್ತೆ ಇವು ಇವರ ಕೃತಿಗಳು. ಅಲ್ಲದೆ ಮಕ್ಕಳ ಕತೆ, ರೇಡಿಯೋ ನಾಟಕಗಳನ್ನೂ ಇವರು ರಚಿಸಿದ್ದಾರೆ. ಈ ಪದ್ಯಭಾಗವನ್ನು ಅವರ **'ಇದೇ ಕೂಗು ಮತ್ತೆ ಮತ್ತೆ'** ಎಂಬ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

**ಪದಗಳ ಅರ್ಥ:**

ಬುವಿ – ಭೂಮಿ; ಅಣು – ಕಣ; ಮಿಗಿಲು – ಶ್ರೇಷ್ಠ; ಭ್ರಮೆ – ಭ್ರಾಂತಿ; ಒಗಟು – ಸುಲಭವಾಗಿ ಅರ್ಥ ಹೇಳಲಾಗದ ಮಾತು; ಸಾಟಿ – ಸಮ.

## – ಅಭ್ಯಾಸ ಚಟುವಟಿಕೆ –

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ:**

೧. ಮಾನವ ಏನೆಂದು ಮೆರೆದಾಡಬಾರದು?

೨. ಮಾನವನಿಗಿರುವ ಭ್ರಮೆ ಯಾವುದು?

೩. ಹಗಲ ಕಿರಣದಲ್ಲಿ ಮರೆಯಾಗುವುದು ಯಾವುದು?

೪. ಚಂದ್ರನಿಗಿಂತ ಹಿರಿಯ ಯಾರು?

೫. ತಾನು ಮಿಗಿಲು ಎಂದು ಹೇಳದಿರುವುದು ಯಾವುದು?

೬ ಎದೆ ತಟ್ಟಿ ಏನು ಹೇಳಬೇಕು?

**ಆ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ:**

೧. ಜಂಬದಿಂದ ಮೆರೆದಾಡುವ ಮಾನವನಿಗೆ ಕವನದಲ್ಲಿ ಹಾಕಿರುವ ಸವಾಲು ಯಾವುದು?

೨. ಅಣು ಸಮಾನನಾದರೂ ಮನುಷ್ಯ ಏನೆಂದು ಕೂಗುವನು?

**ಇ. ಕೆಳಗಿನ ಪದಗಳಿಗೆ ಪದ್ಯದಲ್ಲಿ ಬಳಕೆಯಾಗಿರುವ ಪ್ರಾಸಪದಗಳನ್ನು ಗುರುತಿಸಿ**

ಕಿರಣದಲ್ಲಿ, ಎಂದು, ಕಾಣ್ಕೆ ಏನು



## – ಪ್ರಾಯೋಗಿಕ ಚಟುವಟಿಕೆ –

**ಅ. ಈ ಪದ್ಯವನ್ನು ಕಂಠಪಾಠ ಮಾಡಿರಿ.**

**ಆ. ಒಗಟು ಬಿಡಿಸಿ.**

೧. ಅಪ್ಪನ ದುಡ್ಡು ಎಣಿಸಕ್ಕಾಗಲ್ಲ; ಅಮ್ಮನ ಸೀರೆ ಮಡಿಚಕ್ಕಾಗೊಲ್ಲ. ನಾನು ಯಾರು?

೨. ಹಸಿರು ಗಿಡದ ಮೇಲೆ ಮೊಸರು ಚೆಲ್ಲಿದೆ.

೩. ಮನೆಯೆಲ್ಲಾ ಸುತ್ತುತ್ತೆ; ಮೂಲೇಲಿ ಬಂದು ಕೂರುತ್ತೆ.

*ಉತ್ತರ :*

*೧. ನಕ್ಷತ್ರ ಮತ್ತು ಆಕಾಶ ೨. ಮಲ್ಲಿಗೆ ೩. ಪೊರಕೆ (ಹಿಡಿಸೂಡಿ)*

**ತುಂಬಿದ ಕೊಡ ತುಳುಕುವುದಿಲ್ಲ**



# ವ್ಯಾಕರಣ

ಭಾಷೆ ಒಂದು ಸಂವಹನ ಮಾಧ್ಯಮ. ಅದು ಮಾತು ಮತ್ತು ಬರಹ ರೂಪದಲ್ಲಿ ಅಭಿವ್ಯಕ್ತಿಯಾಗುತ್ತದೆ. ಮಾತುಗಾರಿಕೆ ಅಮೂರ್ತ ರೂಪ, ಬರಹ ಮೂರ್ತರೂಪ. ಇದನ್ನು ಶ್ರವಣ, ಚಾಕ್ಷುಷ ಎಂದು ಪರಿಗಣಿಸಲಾಗಿದೆ. ಮಾತಿನ ಸಾಂಕೇತಿಕ ರೂಪವೇ ಬರಹ.

ಭಾಷೆ ನಮ್ಮ ಸುತ್ತಮುತ್ತಲಿನವರೊಡನೆ ವ್ಯವಹರಿಸುವುದಕ್ಕೆ ಮತ್ತು ವಿಚಾರ ವಿನಿಮಯ ಮಾಡುವುದಕ್ಕೆ ಒಂದು ಅಮೂಲ್ಯ ಸಾಧನ. ಪ್ರಪಂಚದಲ್ಲಿ ಸಾವಿರಾರು ಭಾಷೆಗಳು ಇವೆ ಎಂದು ತಿಳಿದು ಬಂದಿದೆ. ಇಂತವುಗಳಲ್ಲಿ ನಾವು ಮಾತನಾಡುವ ಕನ್ನಡವೂ ಒಂದು ಪ್ರಮುಖ ಭಾಷೆಯಾಗಿದ್ದು, ಕರ್ನಾಟಕ ರಾಜ್ಯದ ಜನರ ವ್ಯವಹಾರ ಭಾಷೆಯಾಗಿದೆ.

ನಾವು ಬರಹದ ಮೂಲಕ ಕನ್ನಡ ಭಾಷೆಯನ್ನು ತಿಳಿಯಬೇಕಾದರೆ, ಲಿಪಿಯ ರೂಪದಲ್ಲಿರುವ ವರ್ಣಮಾಲೆಯನ್ನು ತಿಳಿಯಬೇಕಾಗುತ್ತದೆ.



## ಅ) ಕನ್ನಡ ವರ್ಣಮಾಲೆಯಲ್ಲಿರುವ ಅಕ್ಷರಗಳು

ಕನ್ನಡ ವರ್ಣಮಾಲೆಯಲ್ಲಿ ಒಟ್ಟು ೪೯ ಅಕ್ಷರಗಳಿವೆ. ಅವು ಸ್ವರಗಳು, ಯೋಗವಾಹಗಳು, ವ್ಯಂಜನಗಳು.

## ಕನ್ನಡ ವರ್ಣಮಾಲೆ

| | | |
|---|---|---|
| ಸ್ವರಗಳು | ಅ ಆ ಇ ಈ ಉ ಊ ಋ ಎ ಏ ಐ ಒ ಓ ಔ | ೧೩ |
| ಯೋಗವಾಹಗಳು | (ಅ)ಂ (ಅ)ಃ | ೨ |
| ವರ್ಗೀಯ ವ್ಯಂಜನಗಳು | ಕ್ ಖ್ ಗ್ ಘ್ ಙ್<br>ಚ್ ಛ್ ಜ್ ಝ್ ಞ್<br>ಟ್ ಠ್ ಡ್ ಢ್ ಣ್<br>ತ್ ಥ್ ದ್ ಧ್ ನ್<br>ಪ್ ಫ್ ಬ್ ಭ್ ಮ್ | ೨೫ |
| ಅವರ್ಗೀಯ ವ್ಯಂಜನಗಳು | ಯ್ ರ್ ಲ್ ವ್ ಶ್ ಷ್ ಸ್ ಹ್ ಳ್ | ೯ |
| | **ವರ್ಣಮಾಲೆಯ ಒಟ್ಟು ಅಕ್ಷರಗಳು** | **೪೯** |

## ಆ) ಸ್ವರಗಳ ಅರ್ಥ ಮತ್ತು ವಿಧಗಳು

ಸ್ವತಂತ್ರವಾಗಿ ಉಚ್ಚಾರ ಮಾಡಲಾಗುವ ಅಕ್ಷರಗಳನ್ನು ಸ್ವರಗಳು ಎನ್ನುವರು.

ಸ್ವರಗಳಲ್ಲಿ ಎರಡು ವಿಧ. – ಹ್ರಸ್ವಸ್ವರ, ದೀರ್ಘಸ್ವರ,

೧) **ಹ್ರಸ್ವಸ್ವರ** : ಒಂದು ಮಾತ್ರಾ ಸಮಯದಲ್ಲಿ ಅಥವಾ ಒಂದು ಚಿಟಿಕೆ ಸಮಯದಲ್ಲಿ ಉಚ್ಚರಿಸುವ ಸ್ವರಗಳನ್ನು ಹ್ರಸ್ವಸ್ವರ ಎನ್ನುವರು.

***ಉದಾ :*** ಅ, ಇ, ಉ, ಋ, ಎ, ಒ.

೨) **ದೀರ್ಘಸ್ವರ** : ಎರಡು ಮಾತ್ರಾಕಾಲದಲ್ಲಿ ಉಚ್ಚರಿಸುವ ಸ್ವರಗಳನ್ನು ದೀರ್ಘಸ್ವರ ಎನ್ನುವರು.

***ಉದಾ :*** ಆ, ಈ, ಊ, ಏ, ಐ, ಓ, ಔ.

**ಇ) ಯೋಗವಾಹಗಳ ಅರ್ಥ ಮತ್ತು ವಿಧಗಳು**

'ಯೋಗ' ಎಂದರೆ ಜೊತೆಯಲ್ಲಿ 'ವಾಹ' ಎಂದರೆ ಹೋಗುವುದು ಎಂದು ಅರ್ಥ. ಯಾವುದಾದರೂ ಒಂದು ಅಕ್ಷರ ಸಂಬಂಧದಿಂದ ಮಾತ್ರ ಉಚ್ಚರಿಸುವಂತಹವುಗಳು ಯೋಗವಾಹಗಳು. ಅವು ಯಾವುವೆಂದರೆ:

೧) ಅನುಸ್ವಾರ (ಂ) — ೨) ವಿಸರ್ಗ (ಃ)

**ಉದಾ:** ಚಂದ, ಕಂದ — **ಉದಾ:** ಪುನಃ, ಬಹುಶಃ

**ಈ) ವ್ಯಂಜನಗಳ ಅರ್ಥ ಮತ್ತು ವಿಧಗಳು**

ಸ್ವತಂತ್ರವಾಗಿ ಉಚ್ಚರಿಸಲಾಗದ ಹಾಗೂ ಸ್ವರಗಳ ಸಹಾಯದಿಂದ ಉಚ್ಚರಿಸಲ್ಪಡುವ ಅಕ್ಷರಗಳಿಗೆ ವ್ಯಂಜನಗಳೆಂದು ಹೆಸರು.

ವ್ಯಂಜನಗಳಲ್ಲಿ ಎರಡು ವಿಧ – ವರ್ಗೀಯ ವ್ಯಂಜನ ಮತ್ತು ಅವರ್ಗೀಯ ವ್ಯಂಜನ

**೧) ವರ್ಗೀಯ ವ್ಯಂಜನಗಳು:**

(ಓದುವ ಅನುಕೂಲಕ್ಕಾಗಿ ವ್ಯಂಜನಗಳಿಗೆ 'ಅ' ಸ್ವರವನ್ನು ಸೇರಿಸಿ ಪಟ್ಟಿ ಮಾಡಲಾಗಿದೆ).

| ವರ್ಗ | ಅಲ್ಪಪ್ರಾಣ | ಮಹಾಪ್ರಾಣ | ಅಲ್ಪಪ್ರಾಣ | ಮಹಾಪ್ರಾಣ | ಅನುನಾಸಿಕ |
|---|---|---|---|---|---|
| ಕ ವರ್ಗ | ಕ | ಖ | ಗ | ಘ | ಙ |
| ಚ ವರ್ಗ | ಚ | ಛ | ಜ | ಝ | ಞ |
| ಟ ವರ್ಗ | ಟ | ಠ | ಡ | ಢ | ಣ |
| ತ ವರ್ಗ | ತ | ಥ | ದ | ಧ | ನ |
| ಪ ವರ್ಗ | ಪ | ಫ | ಬ | ಭ | ಮ |

| | |
|---|---|
| ಅಲ್ಪಪ್ರಾಣ | ಕಡಿಮೆ ಉಸಿರಿನಿಂದ ಉಚ್ಚರಿಸುವ ವ್ಯಂಜನಾಕ್ಷರಗಳನ್ನು ಅಲ್ಪಪ್ರಾಣ ಎನ್ನುವರು.<br>ಕಗ, ಚಜ, ಟಡ, ತದ, ಪಬ |
| ಮಹಾಪ್ರಾಣ | ಹೆಚ್ಚು ಉಸಿರಿನಿಂದ ಉಚ್ಚರಿಸುವ ವ್ಯಂಜನಾಕ್ಷರಗಳನ್ನು ಮಹಾಪ್ರಾಣ ಎನ್ನುವರು.<br>ಖಘ, ಛಝ, ಠಢ, ಥಧ, ಫಭ |
| ಅನುನಾಸಿಕ | ಮೂಗಿನ ಸಹಾಯದಿಂದ ಉಚ್ಚರಿಸುವ ವ್ಯಂಜನಾಕ್ಷರಗಳನ್ನು ಅನುನಾಸಿಕ ಎನ್ನುವರು.<br>ಙ, ಞ, ಣ, ನ, ಮ |

೨) **ಅವರ್ಗೀಯ ವ್ಯಂಜನಗಳು:** ಒಂದು ನಿರ್ದಿಷ್ಟ ವರ್ಗಕ್ಕೆ ಸೇರಿಸಲು ಸಾಧ್ಯವಾಗದ ವ್ಯಂಜನಗಳೇ ಅವರ್ಗೀಯವ್ಯಂಜನಗಳು.

ಯ ರ ಲ ವ ಶ ಷ ಸ ಹ ಳ

## ಗುಣಿತಾಕ್ಷರಗಳು

ಮೂಲವ್ಯಂಜನಗಳಿಗೆ ಕ್ರಮವಾಗಿ ಸ್ವರಗಳು ಸೇರಿ ಗುಣಿತಾಕ್ಷರಗಳು ಆಗುತ್ತವೆ. ಮೊದಲು 'ಕ್' ವ್ಯಂಜನಕ್ಕೆ ಸ್ವರಗಳನ್ನು ಸೇರಿಸುವ ಕ್ರಿಯೆ ಪ್ರಾರಂಭವಾಗುವುದರಿಂದ ಇದನ್ನು 'ಕಾಗುಣಿತ' ಎನ್ನುವರು.

| ವ್ಯಂಜನ | ಸ್ವರ | ಗುಣಿತಾಕ್ಷರ | ಸ್ವರದ ಚಿಹ್ನೆಯ ಹೆಸರು |
|---|---|---|---|
| ಕ್ | ಅ | ಕ | ತಲೆಕಟ್ಟು |
| ಕ್ | ಆ | ಕಾ | ಇಳಿ |
| ಕ್ | ಇ | ಕಿ | ಗುಡಿಸು |
| ಕ್ | ಈ | ಕೀ | ಗುಡಿಸು ದೀರ್ಘ |
| ಕ್ | ಉ | ಕು | ಕೊಂಬು |
| ಕ್ | ಊ | ಕೂ | ಕೊಂಬು ಇಳಿ |
| ಕ್ | ಋ | ಕೃ | ವಟ್ರಸುಳಿ |
| ಕ್ | ಎ | ಕೆ | ಎತ್ವ |
| ಕ್ | ಏ | ಕೇ | ಎತ್ವ ದೀರ್ಘ |
| ಕ್ | ಐ | ಕೈ | ಐತ್ವ |
| ಕ್ | ಒ | ಕೊ | ಒತ್ವ |
| ಕ್ | ಓ | ಕೋ | ಓತ್ವ |
| ಕ್ | ಔ | ಕೌ | ಔತ್ವ |

## ಒತ್ತಕ್ಷರಗಳು

ಒಂದು ವ್ಯಂಜನಾಕ್ಷರಕ್ಕೆ ಯಾವುದೇ ಕಾಲಳಂಬವಿಲ್ಲದೆ ಮತ್ತೊಂದು ವ್ಯಂಜನಾಕ್ಷರವು ಸೇರುವುದಕ್ಕೆ 'ಒತ್ತಕ್ಷರಗಳು' ಅಥವಾ 'ಸಂಯುಕ್ತಾಕ್ಷರ' ಎನ್ನುವರು.

***ವಿಧಗಳು :*** ಒತ್ತಕ್ಷರದಲ್ಲಿ ಎರಡು ವಿಧಗಳಿವೆ

೧. ಸಜಾತೀಯ ಸಂಯುಕ್ತಾಕ್ಷರ　　೨. ವಿಜಾತೀಯ ಸಂಯುಕ್ತಾಕ್ಷರ

**ಸಜಾತೀಯ ಸಂಯುಕ್ತಾಕ್ಷರ :** ಒಂದು ವ್ಯಂಜನಕ್ಕೆ ಅದೇ ಜಾತಿಯ ವ್ಯಂಜನವು ಒತ್ತಾಗಿ ಸೇರಿದರೆ ಅದನ್ನು ಸಜಾತೀಯ ಒತ್ತಕ್ಷರ ಎನ್ನುವರು. ***ಉದಾಹರಣೆ:*** ಅಕ್ಕ, ಅಣ್ಣ ಇತ್ಯಾದಿ.

ಈ ಪದಗಳನ್ನು ಬಿಡಿಸಿದಾಗ ಸಜಾತೀಯ ಸಂಯುಕ್ತಾಕ್ಷರಗಳು ಕಾಣುತ್ತವೆ

ಅಕ್ಕ : ಅ+ಕ್+ಕ್+ಅ=ಅಕ್ಕ, ಅ+ಣ್+ಣ್+ಅ=ಅಣ್ಣ.

**ವಿಜಾತೀಯ ಸಂಯುಕ್ತಾಕ್ಷರ :** ಒಂದು ಜಾತಿಯ ವ್ಯಂಜನಕ್ಕೆ ಬೇರೊಂದು ಜಾತಿಯ ವ್ಯಂಜನ ಸೇರಿದರೆ ಅದನ್ನು ವಿಜಾತೀಯ ಸಂಯುಕ್ತಾಕ್ಷರ ಎನ್ನುವರು. ***ಉದಾಹರಣೆ:*** ಲಗ್ನ, ಶಕ್ತಿ, ಇತ್ಯಾದಿ.

ಲ್+ಅ+ಗ್+ನ್+ಅ=ಲಗ್ನ

## ವಿಭಕ್ತಿ ಪ್ರತ್ಯಯ

ನಾಮಪ್ರಕೃತಿಗಳ ಮುಂದೆ ಸೇರಿ, ಬೇರೆಬೇರೆ ಅರ್ಥವನ್ನುಂಟು ಮಾಡುವ ಉ, ಅನ್ನು, ಇಂದ ಗೆ, ಕೆ ದೆಸೆಯಿಂದ, ಅ, ಅಲ್ಲಿ, ಇತ್ಯಾದಿಗಳಿಗೆ ವಿಭಕ್ತಿ ಪ್ರತ್ಯಯಗಳು ಎನ್ನುವರು. ಈ ಪ್ರತ್ಯಯಗಳಿಗೆ ಮೂಲರೂಪದಲ್ಲಿ ಅರ್ಥವಿಲ್ಲ.

***ನಾಮಪ್ರಕೃತಿ:*** ನಾಮಪದದ ಮೂಲ ರೂಪವನ್ನು ನಾಮಪ್ರಕೃತಿ ಎನ್ನುವರು.

### ವಿಭಕ್ತಿ ಪ್ರತ್ಯಯಗಳು

| ಕ್ರ.ಸಂ. | ವಿಭಕ್ತಿ ಹೆಸರು | ನಾಮಪ್ರಕೃತಿ | ವಿಭಕ್ತಿ ಪ್ರತ್ಯಯ | ನಾಮಪದ |
|---|---|---|---|---|
| ೧ | ಪ್ರಥಮಾ ವಿಭಕ್ತಿ | ಮರ | ಉ | ಮರವು |
| ೨ | ದ್ವಿತೀಯಾ ವಿಭಕ್ತಿ | ಮರ | ಅನ್ನು | ಮರವನ್ನು |
| ೩ | ತೃತೀಯಾ ವಿಭಕ್ತಿ | ಮರ | ಇಂದ | ಮರದಿಂದ |
| ೪ | ಚತುರ್ಥೀ ವಿಭಕ್ತಿ | ಮರ | ಗೆ, ಇಗೆ, ಕ್ಕೆ | ಮರಕ್ಕೆ |
| ೫ | ಪಂಚಮೀ ವಿಭಕ್ತಿ | ಮರ | ದೆಸೆಯಿಂದ | ಮರದ ದೆಸೆಯಿಂದ |
| ೬ | ಷಷ್ಠೀ ವಿಭಕ್ತಿ | ಮರ | ಅ | ಮರದ |
| ೭ | ಸಪ್ತಮೀ ವಿಭಕ್ತಿ | ಮರ | ಅಲ್ಲಿ | ಮರದಲ್ಲಿ |

## ಲಿಂಗಗಳು

ಭಾಷೆಯಲ್ಲಿ ಲಿಂಗ ಅತಿ ಮುಖ್ಯವಾದ ಅಂಶ. ನಾವು ಯಾವುದೇ ಪದವನ್ನು ಬಳಸಿದಾಗ ನಮ್ಮ ಮನಸ್ಸಿಗೆ ಅದು ಗಂಡಸೆಂದಾಗಲಿ, ಹೆಂಗಸೆಂದಾಗಲಿ, ಅವೆರಡೂ ಅಲ್ಲದ್ದು ಎಂದಾಗಲೀ ಅನಿಸಲೇಬೇಕು. ಈ ರೀತಿಯ ಅನಿಸಿಕೆಗಳನ್ನು ಮೂರು ರೀತಿಯಲ್ಲಿ ವಿಂಗಡಿಸುತ್ತೇವೆ. ಅವು ಯಾವುವೆಂದರೆ ಪುಲ್ಲಿಂಗ, ಸ್ತ್ರೀಲಿಂಗ, ಮತ್ತು ನಪುಂಸಕಲಿಂಗ.

**ಪುಲ್ಲಿಂಗ :**

ಯಾವ ಪದಪ್ರಯೋಗ ಮಾಡಿದಾಗ ನಮ್ಮ ಮನಸ್ಸಿಗೆ ಗಂಡಸು ಎಂಬ ಅರ್ಥ ಹೊಳೆಯುವುದೋ ಅದು ಪುಲ್ಲಿಂಗ ಎನಿಸುವುದು. ಉದಾ: ಶಂಕರಾಚಾರ್ಯ, ಮುದುಕ, ಸೋದರ, ಅಪ್ಪ, ಜಟ್ಟಿ, ದೊಡ್ಡವನು, ಕವಿ ಇತ್ಯಾದಿ.

**ಸ್ತ್ರೀಲಿಂಗ :**

ಯಾವ ಪದಪ್ರಯೋಗ ಮಾಡಿದಾಗ ನಮ್ಮ ಮನಸ್ಸಿಗೆ ಹೆಂಗಸು ಎಂಬ ಅರ್ಥ ಹೊಳೆಯುವುದೋ ಅದು ಸ್ತ್ರೀಲಿಂಗ ಎನಿಸುವುದು. ಉದಾ: ನೇತ್ರಾವತಿ, ಮುದುಕಿ, ಸೋದರಿ, ಅಮ್ಮ, ಕವಯಿತ್ರಿ, ರಾಣಿ, ಒಳ್ಳೆಯವಳು, ಅಧ್ಯಕ್ಷೆ, ಸಚಿವೆ ಇತ್ಯಾದಿ.

**ನಪುಂಸಕಲಿಂಗ :**

ಯಾವ ಪದವನ್ನು ಪ್ರಯೋಗಮಾಡಿದಾಗ ಹೆಂಗಸು, ಗಂಡಸು, ಎರಡೂ ಅಲ್ಲದ ಅರ್ಥವು ನಮ್ಮ ಮನಸ್ಸಿಗೆ ಹೊಳೆಯುವುದೋ ಅದು ನಪುಂಸಕಲಿಂಗ ಎನಿಸುವುದು. ಉದಾ: ಮನೆ, ತೋಟ, ಆಕಳು, ಇಟ್ಟಿಗೆ, ಜಲ, ನದಿ, ಪುಸ್ತಕ, ಕುದುರೆ, ಬೆಂಕಿ ಇತ್ಯಾದಿ.



## ವಚನ

ವಚನ ಎಂದರೆ ಸಂಖ್ಯೆ. ಒಂದು ವಸ್ತುವನ್ನು ಸೂಚಿಸುವ ಪದಗಳೆಲ್ಲ ಏಕವಚನದವು. ಒಂದಕ್ಕಿಂತ ಹೆಚ್ಚಾದ ವಸ್ತುಗಳೆಂದು ತಿಳಿಸುವ ಪದಗಳೆಲ್ಲ ಬಹುವಚನ ಪದಗಳು. ಈ ಬಹುವಚನವನ್ನು ಗೌರವ ಸೂಚಕವಾಗಿಯೂ ಬಳಸಲಾಗುತ್ತದೆ.

**ಏಕವಚನ :**

***ಉದಾ:*** ನಾನು, ಮನೆ, ಅರಸ, ಅಣ್ಣ, ತಾಯಿ, ನೀನು.

**ಬಹುವಚನ :**

***ಉದಾ:*** ನಾವು, ಮನೆಗಳು, ಅರಸರು, ಅಣ್ಣಂದಿರು, ತಾಯಿಯರು, ನೀವು.

## ಕಾಲ

ಧಾತುವಿಗೆ ಆಖ್ಯಾತ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತವೆ. ಈ ಎರಡರ ನಡುವೆ ಕ್ರಮವಾಗಿ ಉತ್ತ, ದ, ವ, ಎಂಬ ಕಾಲಸೂಚಕ ಪ್ರತ್ಯಯಗಳು ಸೇರಿ ಕೆಲಸ ನಡೆಯುವ ಕಾಲವನ್ನು ತಿಳಿಸುತ್ತವೆ. ಇದರಲ್ಲಿ ಭೂತಕಾಲ, ವರ್ತಮಾನಕಾಲ ಮತ್ತು ಭವಿಷತ್ ಕಾಲ ಎಂದು ಮೂರು ಬಗೆಗಳಿವೆ.

**ಭೂತಕಾಲ :**

ಧಾತುಗಳಿಗೆ ಭೂತಕಾಲದಲ್ಲಿ ಅಖ್ಯಾತ ಪ್ರತ್ಯಯಗಳು ಸೇರಿ ಭೂತಕಾಲದ ಕ್ರಿಯಾಪದಗಳು ಎನಿಸುವುವು. ಭೂತ ಕಾಲದಲ್ಲಿ 'ದ' ಎಂಬ ಕಾಲಸೂಚಕ ಪ್ರತ್ಯಯವು ಸಾಮಾನ್ಯವಾಗಿ ಬರುವುದು.

***ಉದಾ:*** ಓದಿದನು, ತಿಂದಳು, ಬಂದಿತು, ಹಾಡಿದರು, ಬಂದೆನು.

**ವರ್ತಮಾನಕಾಲ :**

ಧಾತುಗಳಿಗೆ ವರ್ತಮಾನ ಕಾಲದಲ್ಲಿ ಅಖ್ಯಾತ ಪ್ರತ್ಯಯಗಳು ಸೇರಿ ವರ್ತಮಾನ ಕಾಲದ ಕ್ರಿಯಾಪದಗಳು ಎನಿಸುವುವು. ವರ್ತಮಾನಕಾಲದಲ್ಲಿ 'ಉತ್ತ' ಎಂಬ ಕಾಲ ಸೂಚಕ ಪ್ರತ್ಯಯವು ಸಾಮಾನ್ಯವಾಗಿ ಬರುವುದು.

***ಉದಾ:*** ತಿನ್ನುತ್ತಾನೆ, ಓದುತ್ತಾಳೆ, ಬರುತ್ತದೆ, ಹಾಡುತ್ತಾರೆ, ಬರೆಯುತ್ತಾರೆ.

**ಭವಿಷ್ಯತ್‌ಕಾಲ :**

ಧಾತುಗಳಿಗೆ ಭವಿಷತ್ ಕಾಲದಲ್ಲಿ ಅಖ್ಯಾತ ಪ್ರತ್ಯಗಳು ಸೇರಿ ಭವಿಷತ್ ಕಾಲದ ಕ್ರಿಯಾಪದಗಳು ಎನಿಸುವುವು. ಭವಿಷತ್ ಕಾಲದಲ್ಲಿ 'ಉವ' ಎಂಬ ಕಾಲ ಸೂಚಕ ಪ್ರತ್ಯಯವು ಸಾಮಾನ್ಯವಾಗಿ ಬರುವುದು.

***ಉದಾ:*** ಬರುವನು, ಬರುವರು, ಹಾಡುವರು, ಬರೆಯುವರು, ತಿನ್ನುವನು.



## ನಾಮಪದ

ವಸ್ತು, ವ್ಯಕ್ತಿ, ಪ್ರಾಣಿ, ಸ್ಥಳ ಮುಂತಾದವುಗಳ ಹೆಸರುಗಳನ್ನು ಹೇಳುವ ಪದಗಳು 'ನಾಮಪದಗಳು'.

***ಉದಾಹರಣೆ:***

ವಸ್ತು : ಪುಸ್ತಕ

ವ್ಯಕ್ತಿ : ಕಾಳಿದಾಸ

ಪ್ರಾಣಿ : ಆಕಳು, ಜಿಂಕೆ, ಸಿಂಹ

ಸ್ಥಳ : ಬೆಂಗಳೂರು, ಕಾಡು, ಉದ್ಯಾನವನ.

## ನಾಮಪದದ ವಿಧಗಳು

ನಾಮಪ್ರಕೃತಿಗಳಿಗೆ ನಾಮವಿಭಕ್ತಿ ಪ್ರತ್ಯಯಗಳು ಸೇರಿ ನಾಮಪದಗಳು ಎನಿಸುವುವು. ಈ ನಾಮಪದಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು.

### ೧) ವಸ್ತುವಾಚಕ

ವಸ್ತುಗಳ ಹೆಸರುಗಳನ್ನು ಹೇಳುವ ಶಬ್ದಗಳೆಲ್ಲವೂ ವಸ್ತುವಾಚಕಗಳು ಎನಿಸುವುವು. ಉದಾ: ಮನುಷ್ಯ, ಬಸವ, ಮುದುಕ, ಮರ, ಹಣ್ಣು, ಅಡವಿ, ಶಾಲೆ.

ವಸ್ತುವಾಚಕದಲ್ಲಿ ರೂಢನಾಮ, ಅಂಕಿತನಾಮ, ಅನ್ವರ್ಥನಾಮ ಎಂದು ಮೂರು ಭಾಗ ಮಾಡಬಹುದು.

**ರೂಢನಾಮ:** ರೂಢಿಯಿಂದ ಬಂದ ನಾಮವಾಚಕಗಳು ರೂಢನಾಮಗಳು ಎನಿಸುವುವು. ***ಉದಾ:*** ನದಿ, ಪರ್ವತ, ದೇಶ, ಊರು, ಮರ. ಮನುಷ್ಯ, ಹುಡುಗ.

**ಅಂಕಿತನಾಮ:** ವ್ಯವಹಾರದ ಉಪಯೋಗಕ್ಕೆ ಇಟ್ಟುಕೊಂಡ ಹೆಸರುಗಳೆಲ್ಲಾ ಅಂಕಿತನಾಮಗಳು ಎನಿಸುವುವು. ***ಉದಾ:*** ಗಂಗಾ, ಬ್ರಹ್ಮಪುತ್ರ, ಹಿಮಾಲಯ, ಭಾರತ, ಬೇಲೂರು, ಬೇವು, ಪಾರ್ವತಿ.

**ಅನ್ವರ್ಥನಾಮ:** ಅರ್ಥಕ್ಕೆ ಅನುಗುಣವಾಗಿ ಇಟ್ಟ ಹೆಸರುಗಳೆಲ್ಲಾ ಅನ್ವರ್ಥನಾಮಗಳು ಎನಿಸುವುವು. ***ಉದಾ:*** ಯೋಗಿ, ವ್ಯಾಪಾರಿ, ಜಾಣ, ಇತ್ಯಾದಿ.



### ೨) ಗುಣವಾಚಕಗಳು

ವಸ್ತುಗಳ ಗುಣ, ರೀತಿ ಸ್ವಭಾವಗಳನ್ನು ತಿಳಿಸುವ ವಿಶೇಷಣಗಳೆಲ್ಲಾ ಗುಣವಾಚಕಗಳು ಎನಿಸುವುವು, ***ಉದಾ:*** ಕೆಂಪು, ದೊಡ್ಡ, ಚಿಕ್ಕ, ಹಳೆಯ, ಕರಿಯ, ಕೆಟ್ಟ, ಒಳ್ಳೆಯ, ಕಿರಿಯ.

### ೩) ಸಂಖ್ಯಾವಾಚಕ

ಸಂಖ್ಯೆಯನ್ನು ಹೇಳುವ ಶಬ್ದಗಳೆಲ್ಲವೂ ಸಂಖ್ಯಾವಾಚಕ ಎನಿಸುವುವು. ***ಉದಾ:*** ಒಂದು, ಎರಡು, ಹತ್ತು, ಸಾವಿರ, ಲಕ್ಷ.

### ೪) ಸರ್ವನಾಮ

ನಾಮಪದಗಳ ಸ್ಥಾನದಲ್ಲಿ ನಿಂತು, ಅವನ್ನು ಸೂಚಿಸುವ ಶಬ್ದಗಳು ಸರ್ವನಾಮಗಳು ಎನಿಸುವುವು. ***ಉದಾ:*** ಅವನು, ಅವಳು, ಅದು, ಅವು, ನೀನು, ನೀವು, ನಾನು, ಯಾವನು, ಇದು, ಏನು ಇತ್ಯಾದಿ.



# ಪತ್ರಲೇಖನ

ಬರವಣಿಗೆ ಬೆಳೆದುಬಂದ ನಂತರದ ಕಾಲದಲ್ಲಿ ಮನುಷ್ಯ ತನ್ನ ವೈಯಕ್ತಿಕ ಅಥವಾ ವ್ಯಾವಹಾರಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಪತ್ರ ಬರೆಯುವುದನ್ನು ಪ್ರಾರಂಭಿಸಿದ. ಈಜಿಪ್ಟ್‌ನಲ್ಲಿ "ಪ್ಯಾಪಿರಿಸ್" ಎಂಬ ಎಲೆಯ ಮೇಲೆ ಬರೆಯಲಾಗುತ್ತಿತ್ತು ಎಂದು ಹೇಳಲಾಗುತ್ತದೆ. ಬಹಳ ಹಿಂದೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂದೇಶಗಳನ್ನು ಪಾರಿವಾಳಗಳ ಕಾಲಿಗೆ ಕಟ್ಟಿ ಕಳುಹಿಸುತ್ತಿದ್ದರು. ಈಚೆಗೆ "ಚಲವಾಣಿ "(ಮೊಬೈಲ್) ಬಂದ ನಂತರ ಪತ್ರ ವ್ಯವಹಾರ ಬಹಳ ಕಡಿಮೆಯಾಗಿದೆ. ಆದರೂ ವ್ಯವಹಾರಗಳಿಗೆ ಪತ್ರಗಳನ್ನು ಬರೆಯುವ ಅವಶ್ಯಕತೆ ಇದ್ದೇ ಇದೆ. ಹೆಚ್ಚಿನ ಮಾಹಿತಿಗಳನ್ನು ರವಾನೆ ಮಾಡಲು ವೈಯಕ್ತಿಕ ಪತ್ರಗಳೂ ಅಗತ್ಯ.

ಪತ್ರ ಬರೆಯುವುದು ಒಂದು ಕಲೆ. ಅದು ಬರೆಯುವವರ ಕುಶಲತೆಯ ಪ್ರತೀಕ. ಹೇಳಬೇಕಾದ ವಿಷಯವನ್ನು ಸಂಕ್ಷಿಪ್ತವಾಗಿ, ಸರಳವಾಗಿ, ಅಚ್ಚುಕಟ್ಟಾಗಿ ಅಭಿವ್ಯಕ್ತಿಸುವ ಕೌಶಲವನ್ನು ಈ ತರಗತಿಯ ಹಂತದಲ್ಲಿ ತಿಳಿಯಬೇಕು.

ನಮಗೆ ಲಭ್ಯವಿರುವ ಪ್ರಮುಖರ ಕೆಲವು ಉತ್ತಮ ಪತ್ರಗಳ ಮಾದರಿಗಳಲ್ಲಿ ಪಂಡಿತ್ ಜವಾಹರಲಾಲ್ ನೆಹರೂ ಅವರು ಮಗಳಿಗೆ ಬರೆದ ಪತ್ರಗಳು, ಗಾಂಧೀಜಿಯವರ ಪತ್ರಗಳು, ಸ್ವಾಮಿ ವಿವೇಕಾನಂದರು ಅಳಸಿಂಗರಿಗೆ ಬರೆದ ಪತ್ರಗಳು, ನೇತಾಜಿಯವರ "ಆಪ್ತ" ಪತ್ರಗಳು ಪ್ರಮುಖವಾದವು.





## ವೈಯಕ್ತಿಕ ಪತ್ರಕ್ಕೆ ಉದಾಹರಣೆ:

### ವಿಷಯ: ವಿದ್ಯಾಭ್ಯಾಸವನ್ನು ಕುರಿತು ತಂದೆಯವರಿಗೆ ಪತ್ರ

ಹೇಮಾವತಿ
೮ನೇ ತರಗತಿ, 'ಬಿ' ವಿಭಾಗ
ಸರ್ಕಾರಿ ಪ್ರೌಢಶಾಲೆ
ಬೇಲೂರು.
ದಿನಾಂಕ: ೧೩-೦೩-೨೦೧೧

ತೀರ್ಥರೂಪರವರಿಗೆ,

ನಿಮ್ಮ ಮಗಳು ಮಾಡುವ ನಮಸ್ಕಾರಗಳು. ನಾನು ಇಲ್ಲಿ ಕ್ಷೇಮ. ನಿಮ್ಮ ಕ್ಷೇಮ ಸಮಾಚಾರವನ್ನು ಮೇಲಿಂದ ಮೇಲೆ ತಿಳಿಸುತ್ತಿರಿ.

ನನ್ನ ಸದ್ಯದ ವಿದ್ಯಾಭ್ಯಾಸವನ್ನು ಕುರಿತು ತಿಳಿಸಲು ಈ ಪತ್ರ ಬರೆಯುತ್ತಿದ್ದೇನೆ. ನನ್ನ ವಿದ್ಯಾಭ್ಯಾಸವು ಚೆನ್ನಾಗಿ ನಡೆಯುತ್ತಿದೆ. ಶಾಲೆಯ ಗುರುಗಳೆಲ್ಲರೂ ಚೆನ್ನಾಗಿ ಪಾಠ ಮಾಡುತ್ತಾರೆ. ಕಲಿಸಿದ ವಿಷಯಗಳನ್ನು ನಾನು ಪ್ರತಿದಿವಸ ತಪ್ಪದೆ ಅಭ್ಯಾಸ ಮಾಡುತ್ತಿದ್ದೇನೆ. ಕಲಿತ ವಿಷಯಗಳನ್ನು ನನ್ನ ಗೆಳತಿಯರೊಂದಿಗೆ ಚರ್ಚಿಸುತ್ತೇನೆ. ಕಳೆದ ತಿಂಗಳ ಪರೀಕ್ಷೆಯಲ್ಲಿ ನನಗೆ ಶೇ ೮೦ ಅಂಕಗಳು ದೊರಕಿದೆ. ನೀವು ನನ್ನ ವಿದ್ಯಾಭ್ಯಾಸದ ಬಗ್ಗೆ ಚಿಂತಿಸಬೇಡಿ.

ಮನೆಯಲ್ಲಿ ಅಮ್ಮ, ಅಣ್ಣ ಹಾಗೂ ಅಕ್ಕನವರಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ. ಪುಟ್ಟ ತಂಗಿಗೆ ನನ್ನ ಪ್ರೀತಿಯ ಸವಿನೆನಪುಗಳು.

ನಮಸ್ಕಾರಗಳೊಂದಿಗೆ,

ನಿಮ್ಮ ಪ್ರೀತಿಯ ಮಗಳು
ಸಹಿ/-
(ಹೇಮಾವತಿ)

ಇವರಿಗೆ,

ಶ್ರೀ ಪುರುಷೋತ್ತಮ
ಶಾಂತಿ ನಿವಾಸ
ಮಹಾವೀರ ಬಡಾವಣೆ
ಬೀದರ್.

## ರಜಾ ಪತ್ರ

**ಸನತ್ ಕುಮಾರ್ .ಪಿ**
ಎಂಟನೇ ತರಗತಿ,
ಸರ್ಕಾರಿ ಪ್ರೌಢಶಾಲೆ,
ಬಳ್ಳಾರಿ,

ದಿನಾಂಕ ೧–೦೬–೨೦೧೧

ಇವರಿಗೆ,

**ಮುಖ್ಯೋಪಾಧ್ಯಾಯರು,**
ಸರ್ಕಾರಿ ಪ್ರೌಢಶಾಲೆ,
ಗಾಂಧಿನಗರ, ಬಳ್ಳಾರಿ.

ಮಾನ್ಯರೆ,

**ವಿಷಯ : ಮೂರು ದಿನಗಳ ರಜೆಯನ್ನು ಕೋರುವ ಬಗ್ಗೆ.**

*–*–*

ನಾನು ದಿನಾಂಕ ೨–೦೬–೨೦೧೧ ರಿಂದ ೪–೦೬–೨೦೧೧ ರವರೆಗೆ ಶಾಲೆಗೆ ಹಾಜರಾಗಲು ಆಗುತ್ತಿಲ್ಲ. ಏಕೆಂದರೆ ಮನೆಯಲ್ಲಿ ಅಕ್ಕನ ಮದುವೆಯಿದೆ. ಅದಕ್ಕಾಗಿ ಮೇಲೆ ತಿಳಿಸಿರುವ ಮೂರು ದಿನಗಳ ಕಾಲ ನನಗೆ ರಜೆಯನ್ನು ನೀಡಬೇಕಾಗಿ ವಿನಂತಿಸಿಕೊಳ್ಳುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಧೇಯ ವಿದ್ಯಾರ್ಥಿ
ಸಹಿ/–
**(ಸನತ್ ಕುಮಾರ್ .ಪಿ)**

## ರಜಾ ಪತ್ರ (ನಮೂನೆ)

ಇವರಿಂದ ದಿನಾಂಕ..............................

...............................
...............................
...............................
...............................

ಇವರಿಗೆ,

...............................
...............................
...............................
...............................

ಮಾನ್ಯರೆ,

**ವಿಷಯ : ...........................................................**

*–*–*

..................................................................................................................................................................................................................................................................................................................................................................................................................................................................................................................................................................

ವಂದನೆಗಳೊಂದಿಗೆ,

ತಮ್ಮ ವಿಧೇಯ ವಿದ್ಯಾರ್ಥಿ
ಸಹಿ/–

(..............................)

## ತಂದೆಗೆ ಪತ್ರ (ನಮೂನೆ)

ಕ್ಷೇಮ

ಇವರಿಂದ

..................................

..................................

..................................

..................................

ದಿನಾಂಕ.............................

**ತೀರ್ಥರೂಪ,**

..............................................................................................................................................

..............................................................................................................................................

..............................................................................................................................................

..............................................................................................................................................

..............................................................................................................................................

..........................................................................

..............................................................................................................................................

..............................................................................................................................................

...........................................................................................

ನಮಸ್ಕಾರಗಳೊಂದಿಗೆ,

ತಮ್ಮ ಪ್ರೀತಿಯ

ಸಹಿ

(.............................)

ಇವರಿಗೆ,

..........................................................

..........................................................

..........................................................

..........................................................

# ಪ್ರಬಂಧ

'ಪ್ರ' ಎಂದರೆ ವಿಶೇಷವಾದ ಮತ್ತು 'ಬಂಧ' ಎಂದರೆ ಕಟ್ಟು ಎಂಬ ಅರ್ಥವಿದೆ. ಹಾಗಾಗಿ ಪ್ರಬಂಧ ಎಂದರೆ ಪದಗಳ ಅಥವಾ ವಾಕ್ಯಗಳ, ವಿಷಯಗಳ ವಿಶೇಷವಾದ ಕಟ್ಟು ಎಂದರ್ಥವಾಗುತ್ತದೆ. ನಾವು ನೋಡಿದ, ಕೇಳಿದ, ಅನುಭವಿಸಿದ ಸಂಗತಿಗಳನ್ನು ಕುರಿತಂತೆ ಸರಳವಾಗಿ, ಸುಂದರ ನುಡಿಗಳಿಂದ ಬರೆಯುವ ಒಂದು 'ಪುಟ್ಟ' ಲೇಖನವಿದು. ಕನ್ನಡ ಸಾಹಿತ್ಯದಲ್ಲಿ ಪ್ರಬಂಧ ಸಾಹಿತ್ಯ ಹೆಮ್ಮರವಾಗಿ ಬೆಳೆದಿದೆ. ಈ ಪ್ರಬಂಧದಲ್ಲಿ ಲಘು ಪ್ರಬಂಧ, ಹರಟೆ, ಸಂಶೋಧನಾತ್ಮಕ ಪ್ರಬಂಧ ಇತ್ಯಾದಿ ಅನೇಕ ಪ್ರಕಾರಗಳಿವೆ.

ನೀವು ನೋಡಿರುವ ಸ್ಥಳ, ನಿಮಗೆ ಇಷ್ಟವಾದ ಪ್ರಾಣಿ, ಪಕ್ಷಿ, ಮರ, ಗಿಡ, ತಿಂಡಿ, ವ್ಯಕ್ತಿಗಳು ಇವುಗಳನ್ನು ಕುರಿತಂತೆ ಸರಳವಾದ ಪದಗಳಲ್ಲಿ ಪುಟ್ಟ ಪ್ರಬಂಧವನ್ನು ಬರೆಯುವ ಕಲೆಯನ್ನು ಈ ತರಗತಿಯಲ್ಲಿ ಕಲಿತರೆ ಸಾಕು.

*ಉದಾಹರಣೆ:*

**ನಾನು ಮೆಚ್ಚಿದ ಪ್ರಾಣಿ:**

ನನಗೆ ಎತ್ತು ಎಂದರೆ ತುಂಬಾ ಇಷ್ಟ. ಇದು ರೈತರಿಗೆ ಪರಮ ಮಿತ್ರ. ಎತ್ತು ಹೊಲ ಗದ್ದೆಗಳಲ್ಲಿ ಅಗತ್ಯವಾದಾಗಲೆಲ್ಲಾ ದುಡಿಯುತ್ತದೆ. ಅದು ಉಳುತ್ತದೆ, ಬಂಡಿ ಎಳೆಯುತ್ತದೆ. ಗಿಡಗಳಿಗೆ ಗೊಬ್ಬರ ನೀಡುತ್ತದೆ. ಅದು ಸತ್ತನಂತರವೂ ಉಪಕಾರಿ. ಅದರ ಚರ್ಮ ದೇವಾಲಯಗಳಲ್ಲಿ ನಗಾರಿಯಾಗುತ್ತದೆ, ಮೀನುಗಾರರಿಗೆ ತೆಪ್ಪವಾಗುತ್ತದೆ, ಶ್ರೀಮಂತರ ಮೋಜಿನ ಚೀಲ, ಚಪ್ಪಲಿಯಾಗುತ್ತದೆ.

ಇಂತಹ ನಿರುಪದ್ರವಿಯಾದ ಎತ್ತನ್ನು ಮನುಷ್ಯ ನೋಡಿಕೊಳ್ಳುವುದಾದರೂ ಹೇಗೆ? ಅದು ಏನನ್ನೂ ಕಾಡಿ ಕೇಳುವುದಿಲ್ಲ, ಅತ್ತು ಬೇಡುವುದಿಲ್ಲ. ನಾವಾಗಿಯೇ ಹಾಕಿದರೆ ಹುಲ್ಲು ತಿನ್ನುತ್ತದೆ, ಕೊಟ್ಟರೆ ನೀರು ಕುಡಿಯುತ್ತದೆ. ಭಾರತದ ರೈತರು ಈ ಪ್ರಾಣಿಯನ್ನು ದೇವರೆಂದು ಪೂಜಿಸುತ್ತಾರೆ. ಇಷ್ಟು ಉಪಕಾರಿಯಾದ ಈ ಎತ್ತನ್ನು ನಾವು ಪ್ರೀತಿಯಿಂದ ನೋಡಿಕೊಳ್ಳಬೇಕು, ಜಾಗರೂಕತೆಯಿಂದ ಇದಕ್ಕೆ ಆರೈಕೆ ಮಾಡಬೇಕು.



## – ಅಭ್ಯಾಸ –

**ನೀವು ಮೆಚ್ಚಿದ ಸ್ಥಳ / ವ್ಯಕ್ತಿ / ಪ್ರಾಣಿ / ತಿಂಡಿ / ಅಥವಾ ಇನ್ನಾವುದೇ ವಸ್ತುವನ್ನು ಕುರಿತು ಒಂದು ಚಿಕ್ಕ ಪ್ರಬಂಧ ಬರೆಯಿರಿ.**

# ಗಾದೆಮಾತಿನ ವಿಸ್ತರಣೆ

ಗಾದೆ ವೇದಕ್ಕೆ ಸಮಾನ ಎಂಬ ಮಾತಿದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಗಾದೆಯೂ ಇದೆ. ಈ ಮಾತುಗಳು ಗಾದೆಗಳ ಮಹತ್ವವನ್ನು ತಿಳಿಸುತ್ತವೆ. ಇವು ಬದುಕಿಗೊಂದು ಊರುಗೋಲು, ದಾರಿದೀಪವಾಗಿ ಬೆಳಗಿವೆ.

ಪ್ರಾಚೀನ ಕಾಲದಿಂದಲೂ ಮಾನವನು ತನ್ನ ಮತ್ತು ಇತರರ ಬದುಕಿನಲ್ಲಿ ಕಂಡುಂಡ ನೋವು–ನಲಿವುಗಳ, ಸುಖದುಃಖಗಳ ಅನುಭವಗಳನ್ನು ಸೂತ್ರರೂಪದಲ್ಲಿ ಹೇಳಿರುವ ಮಾತುಗಳೇ ಗಾದೆಗಳು. ಗಾದೆ ಮಾತುಗಳಿಗೆ ಭಾಷಾಬಂಧನವಿಲ್ಲ. ಎಲ್ಲ ಭಾಷೆಗಳಲ್ಲೂ ಗಾದೆಗಳು ರೂಢಿಯಲ್ಲಿವೆ.

ಗಾದೆಯನ್ನು ವಿಸ್ತರಿಸುವ ಅಭ್ಯಾಸದಿಂದ ಭಾಷಾ ಪ್ರೌಢಿಮೆ ಬೆಳೆಯುತ್ತದೆ. ಹೀಗೆ ವಿಸ್ತರಿಸುವಾಗ ಕೆಲವು ಅಂಶಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಒಳ್ಳೆಯದು.

- ಗಾದೆಮಾತಿನ ಮೇಲು ನೋಟಕ್ಕೆ ಕಾಣುವ ಅರ್ಥವಿವರಣೆ
- ಗಾದೆ ಹೇಳಬಯಸುವ ದನಿಯ ವಿವರಣೆ
- ಗಾದೆ ಮಾತಿನ ಅರ್ಥವನ್ನು ಸ್ಪಷ್ಟಪಡಿಸುವ ಉದಾಹರಣೆಗಳು
- ಇದೇ ಗಾದೆಮಾತಿನ ಅರ್ಥವನ್ನು ಸ್ಫುರಿಸುವ ಇತರ ಗಾದೆಗಳ(ಸಿಗುವುದಾದರೆ) ಪ್ರಸ್ತಾಪ.

*ಉದಾಹರಣೆ:*

**ಆಕಳು ಕಪ್ಪಾದರೆ ಹಾಲು ಕಪ್ಪೇ?**

ಹಾಲನ್ನು ಕೊಡುವ ಪ್ರಾಣಿ ಹಸು. ಅದು ಯಾವುದೇ ಬಣ್ಣದ್ದಾಗಿದ್ದರೂ ನೀಡುವ ಹಾಲು ಬಿಳಿಯಾಗಿಯೇ ಇರುತ್ತದೆ. ಅದರ ವಿಧ ವಿಧ ಬಣ್ಣದಂತೆ ಹಾಲಿನ ಬಣ್ಣ ಇರುವುದಿಲ್ಲ. ಹಾಗೆಯೇ ಒಬ್ಬ ವ್ಯಕ್ತಿಯ ಗುಣಸ್ವಭಾವಗಳು ಅವನು ಧರಿಸುವ ಬಟ್ಟೆಬರೆಯಿಂದಾಗಲೀ, ತೊಡುವ ತೊಡುಗೆಗಳಿಂದಾಗಲೀ, ವಾಸಿಸುವ ಮನೆಯಿಂದಾಗಲೀ ತಿಳಿಯುವುದಿಲ್ಲ. ಉತ್ತಮರು ಹೇಗೇ ಇದ್ದರೂ ಅವರ ಯೋಚನೆಗಳು, ಮನಸ್ಸು, ಕಾರ್ಯಗಳು ಒಳ್ಳೆಯದೇ ಆಗಿರುತ್ತವೆ. ಕಬ್ಬು ಡೊಂಕಾದರೂ ಸಿಹಿ ಡೊಂಕಾಗಿರುವುದಿಲ್ಲ. ಅರಮನೆಯಲ್ಲಿ ಮತ್ತು ಗುಡಿಸಿಲಿನಲ್ಲಿ ಬೆಳಗುವ ದೀಪ ಒಂದೇ ತೆರನಾದ ಬೆಳಕನ್ನು ಕೊಡುತ್ತದೆ. ಅದಕ್ಕಾಗಿ ಮಾನವನ ಒಳ್ಳೆಯ ಗುಣಗಳು ವೇಷಭೂಷಣಗಳಿಂದಾಗಲೀ ಜಾತಿಮತದಿಂದಾಗಲೀ ದೇಶ ಭಾಷೆಗಳಿಂದಾಗಲೀ ವಿಕಾರವಾಗುವುದಿಲ್ಲ. ಆಕಳು ಬಣ್ಣದಲ್ಲಿ ಕಪ್ಪಗಿದ್ದರೂ ನೀಡುವ ಹಾಲು ಬಿಳಿಯಾಗಿಯೇ ಇರುವಂತೆ ಉತ್ತಮರ ಬದುಕನ್ನು ಅವರ ಹೊರ ನೋಟದ ಮೇಲೆ ಅಳೆಯುವಂತಹುದಲ್ಲ.





# ಅರ್ಥಸಹಿತ ಪದಕೋಶ

**ಅ**

ಅಕ್ಕರೆ – ಪ್ರೀತಿ
ಅಡವಿ – ಕಾಡು
ಅಣು – ಕಣ
ಅತ್ಯುತ್ತಮರು – ಬಹಳ ಬುದ್ಧಿವಂತರು
ಅನಿಸಿಕೆ – ಅಭಿಪ್ರಾಯ
ಅಪಾಯ – ಆಪತ್ತು / ತೊಂದರೆ
ಅಭಿನಯ – ನಟನೆ
ಅರ್ಧನಾರೀಶ್ವರ – ಅರ್ಧ ಭಾಗ ನಾರಿ ಮತ್ತು ಅರ್ಧ ಭಾಗ ಈಶ್ವರ
ಅಲೆದಾಡು – ತಿರುಗಾಡು
ಅವ್ವ – ತಾಯಿ
ಅವಿನಾಭಾವ – ಬಿಡಿಸಲಾಗದ
ಅಸ್ವಸ್ಥ – ಅನಾರೋಗ್ಯ

**ಆ**

ಆಕಸ್ಮಿಕ – ಅಕಸ್ಮಾತ್ತಾಗಿ, ಅನಿರೀಕ್ಷಿತ
ಆಕಳು – ಹಸು
ಆಟೋಮ್ಯಾಟಿಕ್ – ತಾನೇ ತಾನಾಗಿ
ಆದಿಶೇಷ – ಹಾವು
ಆಧಾರ – ಆಶ್ರಯ
ಅನಾಹುತ – ಅಪಾಯ
ಆಯಾಸ – ಸುಸ್ತು
ಆಸರೆ – ಆಶ್ರಯ

**ಇ**

ಇಂಗು – ಒಣಗು
ಇಚ್ಛೆ – ಬಯಕೆ
ಇಮ್ಮಡಿ – ಎರಡು ಪಟ್ಟು
ಇರುಳು – ರಾತ್ರಿ
ಇಹಪರ – ಭೂಲೋಕ ಮತ್ತು ಸ್ವರ್ಗಲೋಕ
ಇಳಿದಾವ – ಇಳಿದಿವೆ

**ಉ**

ಉಕ್ಕು – ಹೆಚ್ಚಾಗು
ಉಗ್ಗು – ಎಸೆ
ಉಗ್ರ – ಭಯಂಕರ
ಉಣ್ಣು – ಊಟಮಾಡು
ಉದ್ಯಾನ – ತೋಟ
ಉಪಚಾರ – ಸೇವೆ
ಉಪಶಮನ – ಪರಿಹಾರ
ಉಬ್ಬುಶಿಲ್ಪ – ಉಬ್ಬಿಕೊಂಡಿರುವ ಶಿಲ್ಪ
ಉಸುಕು – ಮರಳು

**ಊ**

ಊಡು – ಉಣಿಸು

**ಎ**

ಎಡವಟ್ಟು – ತೊಂದರೆ

**ಐ**

ಐತಿಹಾಸಿಕ – ಇತಿಹಾಸಕ್ಕೆ ಸಂಬಂಧಿಸಿದ

**ಒ**

ಒಗಟು – ಸುಲಭವಾಗಿ ಅರ್ಥವಾಗದ
ಒಗೆ – ಎಸೆ
ಒರಟ – ನಯವಿಲ್ಲದವ

**ಓ**

ಓಕುಳಿ – ಕೆಂಪುನೀರು
ಓಟಕೀಳು – ಓಡಿಹೋಗು

**ಕ**

ಕಂಗಾಲು – ಏನು ಮಾಡಲೂ ತೋಚದಾಗು
ಕಂಗೊಳಿಸು – ಕಾಣು
ಕಡಿದೊಗೆದು – ಕಚ್ಚಿಎಸೆದು
ಕಣ್ಮನ – ಕಣ್ಣು ಮತ್ತು ಮನಸ್ಸು

ಕಮಾನು – ಅರ್ಧ ಚಂದ್ರಾಕಾರದ (ಬಾಗಿದ)
ಕರ್ಚೀಫ್ – ಕರವಸ್ತ್ರ
ಕಳಚು – ಬಿಡಿಸು
ಕಹಳೆ – ಉದ್ದವಾಗಿದ್ದು ಬಾಗಿರುವ ಒಂದು ಗಾಳಿ ವಾದ್ಯ
ಕಳಿತು – ಪಕ್ವವಾದ
ಕೆಚ್ಚು – ಧೈರ್ಯ
ಕಾಪಾಡು – ರಕ್ಷಿಸು
ಕಾಯಿಕೊರಕ – ಕಾಯಿ ರಂಧ್ರ ಮಾಡುವ ಹುಳ
ಕಾಲರುದ್ರ – ಪ್ರಳಯಕಾಲದ ಶಿವ
ಕಾಲುಮುಟ್ಟು – ನಮಸ್ಕರಿಸು
ಕ್ಯಾದಗಿ – ಕೇದಗೆ/ತಾಳೆಯ ಹೂವು
ಕಿಮ್ಮತ್ತು – ಬೆಲೆಬಾಳುವ
ಕಿರುಚಾಟ – ಕೂಗಾಟ
ಕಿಸ್ಕಾರ – ಒಂದು ಜಾತಿಯ ಹಣ್ಣು
ಕಿಸೆ – ಜೇಬು
ಕುಂದು – ಕಡಿಮೆ, ಕೊರತೆ
ಕುಣಿದಾವ – ಕುಣಿದಿವೆ
ಕುರುಡು – ಕಣ್ಣು ಕಾಣದಿರುವಿಕೆ
ಕುಶಲಪ್ರಶ್ನೆ – ಆರೋಗ್ಯ ವಿಚಾರಣೆ
ಕೈಗೆಟುಕು – ಕೊಳ್ಳಲು ಸಾಧ್ಯವಾಗು
ಕೈಜೋಡಿಸು – ನಮಸ್ಕರಿಸು
ಕೊಡಲಿ – ಒಂದು ಆಯುಧ
ಕೋಳೆಹೂವು – ಚಿಕ್ಕ ತಾವರೆ ಹೂವು

**ಖ**

ಖಡಕ್ – ಗರಿಗರಿಯಾಗಿ

**ಗ**

ಗಡಿ – ಎಲ್ಲೆ
ಗತ್ತು – ಅಹಂಕಾರ
ಗದರಿಸು – ಹೆದರಿಸು
ಗದ್ದಲ – ಗಲಾಟೆ
ಗರಬಡಿದಂತೆ –ಗ್ರಹಬಡಿದಂತೆ,ಮಿಸುಕಾಡದಂತೆ
ಗಲ್ಲು – ಒಂದು ಜಾತಿಯ ಹಕ್ಕಿ
ಗಾಢವಾಗಿ – ಆಳವಾಗಿ
ಗಾಬರಿ – ಹೆದರಿಕೆ
ಗಾವಿಲರು – ಬುದ್ಧಿ ಇಲ್ಲದವರು
ಗುಳಿಮಾಡು – ಹೊಂಡಮಾಡು / ಹಳ್ಳಮಾಡು
ಗುಹಾಂತರ ದೇವಾಲಯ – ಗುಹೆಯೊಳಗೆ ಇರುವ ದೇವಾಲಯ
ಗೋವೆ ಹಣ್ಣು – ಪೇರಳೆ ಹಣ್ಣು
ಗ್ರಹತಾರೆ – ಗ್ರಹ ಮತ್ತು ನಕ್ಷತ್ರ

**ಚ**

ಚಂದ – ಅಂದ
ಚಮತ್ಕಾರ – ಕೈಚಳಕ
ಚಾರ್ಜ್ – ಜವಾಬ್ದಾರಿ
ಚಾಳೀಸು – ಕನ್ನಡಕ
ಚಿಟ್ಟನೆ ಚೀರಿ – ಗಟ್ಟಿಯಾಗಿ ಕಿರುಚಿ
ಚೀಪ್ – ಕಡಿಮೆ ಬೆಲೆಯ

**ಜ**

ಜಟಾಧಾರಿ – ಶಿವ
ಜಡಿಮಳೆ – ಒಂದೇ ಸಮನೆ ಸುರಿವ ಮಳೆ
ಜತೆ ಬಿಡು – ಸಂಗ ಬಿಡು
ಜಸ – ಕೀರ್ತಿ
ಜಿಗಿ – ನೆಗೆ
ಜೀರ್ಣೋದ್ಧಾರ – ಹಳೆಯದನ್ನು ಸರಿಪಡಿಸುವುದು
ಜೋಪಾನ – ಕಾಪಾಡು
ಜ್ಞಾನದ ಮಾತು – ಬುದ್ಧಿವಂತಿಕೆಯ ಮಾತು

ಝ

ಝಾಡಿಸು – ಕೊಡವು

ಟ

ಟವೆಲ್ – ಆಯತಾಕಾರದ ಮೈ ಒರೆಸುವ ಬಟ್ಟೆ

ಟೋಪಿ ಹಾಕು – ಮೋಸಮಾಡು

ಡ

ಡಬಿಲು – ಒಂದು ವಾದ್ಯ

ತ

ತಂಟೆ – ಚೇಷ್ಟೆ

ತಗ್ಗಿಹೋಗು – ಕುಗ್ಗಿಹೋಗು

ತಟ್ಟನೆ – ತಕ್ಷಣ

ತಂದಾವ – ತಂದಿವೆ

ತಣಿಸು – ತೃಪ್ತಿಪಡಿಸು

ತವರು – ತಾಯಿಯ ಮನೆ

ತರಿ – ಕತ್ತರಿಸು

ತಗ್ಗಿಹೋಗು – ಕುಗ್ಗಿಹೋಗು

ತಾವು – ಜಾಗ

ತಾತ್ಕಾಲಿಕ – ತತ್ ಕ್ಷಣದ, ಶಾಶ್ವತವಲ್ಲದ

ತ್ರಾಣ – ಶಕ್ತಿ

ತುಂಡು – ಚೂರು

ತುಂಬ್ಯಾವ – ತುಂಬಿವೆ

ತುಚ್ಛ – ಕೀಳು

ತುರುಬು – ಕೂದಲಿನ ಗಂಟು

ತೇವ – ಒದ್ದೆ

ತೋಣಚಿ – ಪ್ರಾಣಿಗಳನ್ನು, ಪ್ರಮುಖವಾಗಿ ದನಕರುಗಳನ್ನು ಹಿಂಸಿಸುವ ಒಂದು ಹುಳ

ತೋರಣ – ಅಲಂಕಾರಕ್ಕಾಗಿ ಬಾಗಿಲು ಮೊದಲಾದವುಗಳಿಗೆ ಕಟ್ಟುವ ಚಿಗುರು

ಥ

ಥಟ್ಟನೆ – ತಕ್ಷಣ

ದ

ದಂಡೆ – ದಡ

ದಿಗಿಲು – ಭಯ

ದಿಗ್ಭ್ರಮೆ – ಆಶ್ಚರ್ಯ

ದಿಟ್ಟಿಸಿ ನೋಡು – ಗಮನವಿಟ್ಟು ನೋಡು

ದಿನಚರಿ – ದಿನನಿತ್ಯದ ಕೆಲಸ

ದುರಾಸೆ – ಅತಿಯಾಸೆ

ದೈತ್ಯ – ಅತಿದೊಡ್ಡ

ದೈನ್ಯ – ದೀನಭಾವ

ದೈತ್ಯ – ದೊಡ್ಡಗಾತ್ರದ

ದ್ಯೋತಕ – ಗುರುತು

ದೃಶ್ಯ – ನೋಟ

ಧ

ಧ್ವನಿ – ಶಬ್ದ

ಧಾಳಿ – ಮೇಲೆ ಬೀಳು, ಮೇಲೆ ಬಿದ್ದು ಆವರಿಸು

ಧುಮುಕು – ಹಾರು

ಧ್ಯಾನ – ನೆನಪು

ನ

ನಗದು – ಹಣ

ನಗಿನವಿಲು – ನಗುವ ನವಿಲು

ನವರತ್ನ – ಒಂಬತ್ತು ರೀತಿಯ ರತ್ನ

ನಾಮಾಂಕಿತ – ಕೊಟ್ಟ ಹೆಸರು

ನಿರಾಳ – ಚಿಂತೆ ಇಲ್ಲದ

ನಿವಾಸ – ಮನೆ

ನಿಶ್ಚಯ – ನಿರ್ಧಾರ

ನೀರ್ಕಾಗೆ – ನೀರಿನಲ್ಲಿ ಆಡುವ ಕಾಗೆ

ನೀರ್ಮಳೆ – ನೀರಿನ ಮಳೆ

ನೆರೆ – ಪಕ್ಕ

ನೆರೆಹೊರೆ – ಅಕ್ಕಪಕ್ಕ

ನೈಸರ್ಗಿಕ – ಸ್ವಾಭಾವಿಕ

ನೈಸರ್ಗಿಕ ಗುಹೆ – ಮಾನವನಿರ್ಮಿತವಲ್ಲದ, ಸ್ವಾಭಾವಿಕವಾದ ಗುಹೆ

ಪ

ಪಡುವಣ – ಪಶ್ಚಿಮ
ಪಥ್ಯ – ಆರೋಗ್ಯಕರ/ಒಳ್ಳೆಯದು
ಪರಶು – ಕೊಡಲಿ
ಪಾಲ್ಗಡಲು – ಹಾಲಿನ ಕಡಲು
ಪುಟಾಣಿ – ಚಿಕ್ಕ, ಪುಟ್ಟ
ಪುತ್ರ ರತ್ನ – ಶ್ರೇಷ್ಠ ಪುತ್ರ
ಪೂಜ್ಯ – ಗೌರವಯುತ (ಪೂಜೆಗೆ ಅರ್ಹರಾದ)
ಪೆಣ್ಣು – ಹೆಣ್ಣು
ಪೆತ್ತು – ಹೆತ್ತು
ಪೆಸರು – ಹೆಸರು/ಕೀರ್ತಿ
ಪೊರೆ – ರಕ್ಷಿಸು
ಪ್ರತಿಜ್ಞೆ – ಶಪಥ
ಪ್ರತಿಫಲ – ಮಾಡಿದ ಕೆಲಸಕ್ಕೆ ಸಿಗುವ ಫಲ
ಪ್ರಥಮ ಚಿಕಿತ್ಸೆ – ಅಪಾಯ/ತೊಂದರೆ ಒದಗಿದಾಗ ತತ್‌ಕ್ಷಣ ಮಾಡುವ ಚಿಕಿತ್ಸೆ
ಪ್ರಭು – ರಾಜ, ಒಡೆಯ
ಪ್ರಾಚೀನ – ಹಿಂದಿನ

ಬ

ಬರಗಾಲ – ಕ್ಷಾಮಕಾಲ
ಬರಮಾಡಿಕೊ – ಸ್ವಾಗತಿಸು
ಬಲೆ – ಮೀನು ಹಿಡಿಯಲು ಬಳಸುವ ವಸ್ತು
ಬಾನು – ಆಕಾಶ
ಬಿಡಾರ – ಮನೆ/ವಾಸಮಾಡುವ ಸ್ಥಳ
ಬಿಡುವು – ವಿರಾಮ
ಬಿರುಮಳೆ – ಬಿರುಸಾಗಿ ಬೀಳುವ ಮಳೆ
ಬಿಸಿಲ್ ಮಳೆ – ಬಿಸಿಲಲ್ಲಿ ಬೀಳುವ ಮಳೆ
ಬೀಳ್ಕೊಡು – ಕಳುಹಿಸಿಕೊಡು
ಬೆರಗು – ಆಶ್ಚರ್ಯ
ಬೆಳೆ ಉಳಿಕೆ – ಬೆಳೆಯನ್ನು ತೆಗೆದಾಗ ಉಳಿದ ಗಿಡ ಸೊಪ್ಪು (ಕೂಳೆ)
ಬೆಸ್ತರು – ಮೀನು ಹಿಡಿಯುವವರು
ಬೇಗೆ – ದಗೆ
ಬೊಬ್ಬೆ – ಗಟ್ಟಿಯಾಗಿ ಕೂಗು

ಭ

ಭರ – ವೇಗ
ಭರವಸೆ – ನಂಬಿಕೆ
ಭ್ರಮೆ – ಭ್ರಾಂತಿ

ಮ

ಮಕ್ಕಳಾಟ – ಹುಡುಗಾಟ
ಮನಮಿಡಿ – ಕನಿಕರಪಡು
ಮನ್ನಿಸು – ಗೌರವಿಸು
ಮರಿ ತಾವರೆ ಹೂವು – ಚಿಕ್ಕ ತಾವರೆ ಹೂವು
ಮರುಳಾಗು – ಮಾರುಹೋಗು
ಮಲ್ಲಿಗಿ – ಮಲ್ಲಿಗೆ
ಮಲ್ನಾಡ – ಮಲೆನಾಡ
ಮಹಿಮೆ – ಶಕ್ತಿ
ಮಿಂದಾವ – ಮಿಂದಿವೆ
ಮಿಗಿಲು – ಹೆಚ್ಚು
ಮೀನ್ಚುಳ್ಳಿ – ಮೀನು ತಿನ್ನುವ ಒಂದು ಜಾತಿಯ ಹಕ್ಕಿ
ಮೀಸಲಿರುಸು – ಕಾದಿರಿಸು
ಮೀಯುವುದು – ಸ್ನಾನಮಾಡುವುದು
ಮುಗಿಲು – ಆಕಾಶ
ಮುಕುಟಧಾರಿ – ಕಿರೀಟ ಧರಿಸಿದವ
ಮೂಡಣ – ಪೂರ್ವ
ಮೆಟ್ಟಿ – ದಾಟಿ
ಮೆರೆ – ತೋರಿಸಿಕೊ / ಜಂಭಪಡು
ಮೇಲುಗೈ – ಮೊದಲಸ್ಥಾನ
ಮೈದುನ – ಗಂಡನ ತಮ್ಮ
ಮಕ್ಕಳಾಟ – ಹುಡುಗಾಟ

ರ

ರಂಗು – ಬಣ್ಣ
ರಭಸ – ವೇಗ
ರಮ್ಯ – ಸುಂದರ
ರಹಸ್ಯ – ಗುಟ್ಟು
ರೋದಿಸು – ಗೋಳಾಡು

## ಲ

ಲಲನಾಮಣಿ – ಹೆಂಗಸು
ಲಕ್ಷ್ಯ – ಗಮನ
ಲಿಂಗಭೇದ – ಗಂಡು ಹೆಣ್ಣು ಎಂಬ ಭೇದ
ಲೇಡೀಸ್ ಕರ್ಚೀಫ್ – ಹೆಂಗಸರ ಕರವಸ್ತ್ರ

## ವ

ವನಭೋಜನ – ತೋಟ ಅಥವಾ ಕಾಡಿನಲ್ಲಿ ಮಾಡುವ ಊಟ
ವರಹ – ಹಂದಿಯ ಚಿತ್ರವಿರುವ ಒಂದು ಚಿನ್ನದ ನಾಣ್ಯ
ವರಾಹ – ಹಂದಿ
ವಾಕ್ಪತಿ – ಬ್ರಹ್ಮ
ವೈಶಿಷ್ಟ್ಯ – ವಿಶೇಷ
ವ್ಯಾಘ್ರ – ಹುಲಿ
ವಿನಂತಿ – ಮನವಿ
ವಿನ್ಯಾಸ – ವಿವಿಧ ರೀತಿ
ವೀಳ್ಯ – ವೀಳೆಯದೆಲೆ
ವೈಶಿಷ್ಟ್ಯ – ವಿಶೇಷತೆ

## ಶ

ಶಕ್ತ – ಶಕ್ತಿಯುತ
ಶತಮಾನ – ನೂರುವರ್ಷದ ಅವಧಿ
ಶ್ರಮಪಡು – ಕಷ್ಟಪಡು

## ಸ

ಸಂಕೋಚ – ನಾಚಿಕೆ
ಸಂತತಿ – ವಂಶ
ಸಂತೆ – ನಿಯಮಿತ ಕಾಲಾವಧಿಗೆ ಕೊಂಡುಕೊಳ್ಳುವುದಕ್ಕಾಗಿ ಸೇರುವ ಜನರ ಗುಂಪು
ಸನ್ಮಾನ – ಗೌರವ
ಸಮಯಸಾಧಿಸು – ಹೊಂಚುಹಾಕು
ಸಾಟಿ – ಸಮ
ಸಾವಯವ – ನೈಸರ್ಗಿಕ
ಸಾಹಸ – ವೀರತನ
ಸಿಡಿಲೆರಗು – ಗಾಬರಿಯಾಗು
ಸಿರಿ – ಸಂಪತ್ತು
ಸುಕುಮಾರಿ – ಅತ್ಯಂತ ಮೃದುಸ್ವಭಾವದ
ಸುರಿದಾವ – ಸುರಿದಿವೆ
ಸುಲಿ–ಉಜ್ಜು/ತಿಕ್ಕು
ಸೆಂಟ್ – ಸುವಾಸನಾಯುಕ್ತ ದ್ರವ
ಸೆರಗು – ಸೀರೆಯ ಕೊನೆಯ ಭಾಗ
ಸೊಬಗು – ಚೆಲುವು
ಸೊಗಸು – ಸುಂದರ
ಸ್ತರ – ಹಂತ
ಸ್ಫೂರ್ತಿ – ಉತ್ತೇಜನ
ಸ್ಮರಣೆ – ನೆನಪು

## ಹ

ಹಂಬಲ – ಬಯಕೆ
ಹಡೆದಮ್ಮ – ಹೆತ್ತತಾಯಿ
ಹನಿಮಳೆ – ಹನಿಹನಿಯಾಗಿ ಬೀಳುವ ಮಳೆ
ಹರಿದಾವ – ಹರಿದಿವೆ
ಹರಿಹರ – ವಿಷ್ಣು ಮತ್ತು ಶಿವ
ಹಸನ್ಮುಖ – ನಗುಮುಖ
ಹಾಡಿ – ಬೇಲಿ ಹಾಕಿ ರಕ್ಷಿಸಿದ ಕಾಡು
ಹಾದ್ಯಾಗ – ದಾರಿಯಲ್ಲಿ
ಹಿಂಸೆ – ತೊಂದರೆ/ನೋವು
ಹಿಕ್ಕೆ – ಹುಳ ಹೊರಹಾಕುವ ತ್ಯಾಜ್ಯ ವಸ್ತು
ಹಿಗ್ಗು – ಸಂತಸ
ಹೂಮಳೆ – ಹೂಬಿದ್ದಂತೆ ಭಾಸವಾಗುವ ಮಳೆ
ಹೆತ್ತವ್ವ – ತಾಯಿ
ಹೊನ್ನು – ಚಿನ್ನ
ಹೊಯ್ದು – ಸುರಿದು
ಹೌಹಾರಿ – ಹೆದರಿ

